# ಸಿದ್ಧಗಂಗಾ

ಸಂಪುಟ-೨೪ ಸಂಚಿಕೆ-೫ ಮೇ, ೧೯೮೮

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಜಗದಸ್ತುತಿ ನಿಂದೆಗಳ ಗಣನೆಗೆ ತಾರದೆ ಹೋದೆ
ಅಗಣಿತ ಶರಣನೆನಿಸಿದೆ ನನ್ನ ತಂದೆ।
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ನಿಂದಕರ ನುಡಿಸಿದೆ ನೊಂದವರ ನಗಿಸಿದೆ
ನೊಂದು ನರಳುವವರಿಗೆ ನೆರಳಾದೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಗುರು ಶಿಷ್ಯ ಬಾಂಧವ್ಯ ಅರಿವಿನ ಅರಮನೆ
ಸರಕಲ್ಲ ಸಂತೆಯಲಿ ಕೊಳುವುದಕೆ। ಎಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್. ವಿ. ವೀರಭದ್ರಯ್ಯ

# ಈ ಸಂಚಿಕೆಯಲ್ಲಿ

ಲೇಖನದ ಹೆಸರು ಲೇಖಕರ ಹೆಸರು



# ಶ್ರೀವಾಣಿ

ಮನುಷ್ಯನಿಗೆ ಮಾತನಾಡುವುದು ದೈವೀಕೃತಿ. ಅಂತೆಯೇ ಅದೊಂದು ಕಲೆ. ಅವನ ವ್ಯಕ್ತಿತ್ವ ದ್ಯೋತಕವೂ ಹೌದು. ಕಲೆಯೆಂದಾಕ್ಷಣ ಮಾತನಾಡಿದುದೆಲ್ಲಾ ಕಲೆಯಲ್ಲ. ಕಲಾತ್ಮಕವಾಗಬೇಕಾದರೆ ನಾವು ಆಡುವ ಮಾತು ಒಂದು ವ್ಯವಸ್ಥಿತವಾದ ರೀತಿನೀತಿಗಳಿಂದ ಕೂಡಿರಬೇಕು. ರೀತಿ ನೀತಿಯನ್ನರಿಯದ ಮಾತು ಕಲೆಯೆನಿಸಲಾರದು ವ್ಯವಸ್ಥಿತ ಪದ ಜೋಡಣೆ, ಶಬ್ದೋಚ್ಚಾರಣೆಯ ಸ್ಥಾನ ಮಾನಗಳ ಅರಿವು, ಸಂದರ್ಭೋಚಿತ ಸೊಬಗು ಸೌಂದರ್ಯಗಳ ಸೊಗಸುಗಳ ಸಮ್ಮೇಳನ ಕಲೆಯೆನಿಸುವುದು. ಮೃದು ಮಧುರ ಗಂಭೀರ ಭಾವನೆಯಿಂದ ಕೂಡಿ ಆನಂದಾನು ಭೂತಿಯನ್ನುಂಟು ಮಾಡುವಂತಿರಬೇಕು. ಹೃದಯಮಿಡಿತದಿಂದುಂಟಾದ ಆನಂದಾನುಭೂತಿಯ ಅರಿವಿನಿಂದ ಪರಮಾತ್ಮನನ್ನು ಕಾಣಲು ಮಾತು ಸಹಕಾರಿಯಾಗಬೇಕು. ಯಾವ ಕಲೆಯ ಉದ್ದಿಶ್ಯವಾದರೂ ಆನಂದಾನುಭೂತಿಯಲ್ಲಿ ಪರ್ಯವಸಾನವಾಗಬೇಕು. ಈ ದಿಸೆಯಲ್ಲಿ ಚಿಂತಿಸಿದಾಗ ಮಾತಿನ ಮಹತ್ತನ್ನರಿತವರು ಆಡಿದ ಮಾತೇ ಮುತ್ತಾಗುತ್ತದೆ. ಮಾಣಿಕ್ಯವಾಗುತ್ತದೆ ಜ್ಯೋತಿರ್ಲಿಂಗವಾಗುತ್ತದೆ. ಲಿಂಗ ಮೆಚ್ಚಿ ಅಹುದಹುದೆನ್ನುತ್ತದೆ. ಪ್ರಕಾಶ ಮಾನವಾದ ಪರಶಿವನ ಅರಿವನ್ನು ಬೀರುವ ಸಾಮರ್ಥ್ಯವು ಮಾತಿನಲ್ಲಡಗಿರುತ್ತದೆ. ಅಘನಮಹಿಮನ ನಿಲವನ್ನು ಮಾತಿನಿಂದಲೇ ಮನಗಾಣಬಹುದು. ಆದ್ದರಿಂದ ಆಡುವ ಮಾತು ಮೃದು —ಮಧುರವಾಗಿರಬೇಕು. ಹಿತ ಮಿತಿಯಾಗಿರಬೇಕು ಸುಬೋಧ-ಸುರಮ್ಯವಾಗಿರಬೇಕು. ಹೃದಯದ ಆಳದಿಂದ ಹುಟ್ಟಿ ಬೆಳೆದು ಬರಬೇಕು. ಕುಟಿಲ ಕುಯುಕ್ತಿಗಳಿಂದ ದೂರವಾಗಿ ಶುದ್ಧ ಸಾತ್ವಿಕ ಸಂಸ್ಕಾರದಿಂದ ಕೂಡಿರಬೇಕು. ಸಂಸ್ಕಾರಯುತ ಮಾತಿನ ನೆಲೆ ಕಲೆಗಳನ್ನು ಅರಿಯುವುದು ಮನುಷ್ಯನ ಕರ್ತವ್ಯವಾಗಬೇಕು. ಸತ್ಸಂಗವೇ ಜೀವನದ ಸಂಸ್ಕಾರವಾಗಿ ಬೆಳೆಯು ಬೇಕು. ಆಗ ಮಾತು ವ್ಯಕ್ತಿತ್ವದ ವಿಕಾಸಕ್ಕೆ ಸಾಧಕವಾಗುತ್ತದೆ ವ್ಯಕ್ತಿಯ ಬದುಕು ಬಂಧುರವಾಗುತ್ತದೆ.

## ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು

ಪ॥ ಚನ್ನಪ್ಪ ಎರೇಸೀಮೆ

* * *

ಸಂಪಾದಕರು

ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು

ಬಿ. ವೀರಭದ್ರಯ್ಯ

ಪಿ. ಎಸ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

ವಾರ್ಷಿಕ ಚಂದಾ 20 - 00 ರೂ

ಅಜೀವ ಸದಸ್ಯತ್ವ 201 - 00 ರೂ


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ, ಸಿದ್ಧಗಂಗಾ ಆಗಿಂದಾಗ್ಗೆ ನಿಗದಿಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

" ಸಂಪಾದಕರು "

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ

ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಪರಮಪೂಜ್ಯ



ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು

ಉತ್ತರಾಧಿಕಾರಿಗಳು, ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ.

31-3-1988

# ಸಂಪಾದಕೀಯ

## ಕಾರುಣ್ಯ ಕಿರಣ— ಶ್ರೀ ಸಿದ್ಧಲಿಂಗ ಸ್ವಾಮಿಗಳು.

**ಜ್ಯೋತಿಯ ಮುಟ್ಟಿದ ಬತ್ತಿ ಎಲ್ಲ ಜ್ಯೋತಿಯಪ್ಪವಯ್ಯಾ. ಸಾಗರವ ಮುಟ್ಟಿದ ನದಿಗಳೆಲ್ಲ ಸಾಗರವಪ್ಪವಯ್ಯಾ. ಪ್ರಸಾದವ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪವಯ್ಯಾ. ಲಿಂಗವ ಮುಟ್ಟಿದಂಗವೆಲ್ಲ ಲಿಂಗವಪ್ಪವಯ್ಯಾ. ಸಕಳೇಶ್ವರ ದೇವಾ ನಿಮ್ಮ ಮುಟ್ಟಿದವರೆಲ್ಲ ನಿಮ್ಮಂತಪ್ಪರಯ್ಯಾ.**

ದಿನಾಂಕ 31. 3. 1988 ರಂದು ಶ್ರೀ ಮಠದಲ್ಲಿ ಮಂಗಳ ಸಮಾರಂಭ ಹೊಸದಿಕ್ಕನ್ನು ಕಂಡುಕೊಂಡ ಶುಭ ಸನ್ನಿವೇಶ. ಭಕ್ತಕೋಟೀಗೆ ಸಂಭ್ರಮ ನೆಮ್ಮದಿಯನ್ನು ತಂದ ದಿನ. ಶ್ರೀ ಗುರು ಕಾರುಣ್ಯ ಕಿರಣವಾಗಿ ಅರಳಿದ ಪುಣ್ಯ ವಿಶೇಷ.

ಪರಮ ಪೂಜ್ಯ ಶ್ರೀ ಶ್ರೀ ಗಳವರು ಬಸವಾದಿ ಪ್ರಮಥರನ್ನ ಸ್ಮರಿಸಿ' ತಮ್ಮ ಗುರು ಶಿವಯೋಗಿ ಶ್ರೀ ಉದ್ದಾನ ಸ್ವಾಮಿಗಳನ್ನು ಪ್ರಾರ್ಥಿಸಿ, ತಮ್ಮ ಕರಕಮಲ ಸಂಜಾತರನ್ನಾಗಿ ಸ್ವೀಕರಿಸಿ ಪೂಜ್ಯ **ಶ್ರೀ ಸಿದ್ಧಲಿಂಗ ಸ್ವಾಮಿ** ಗಳನ್ನು ಆಶೀರ್ವದಿಸಿ ಲೋಕಸೇವೆಗೆ ದೀಕ್ಷೆನೀಡಿದರು. ಜ್ಯೋತಿ ಮುಟ್ಟಿ ಜ್ಯೋತಿಯಾದರು, ಸಾಗರವ ಮುಟ್ಟಿ ಸಾಗರವಾದರು,, ಪ್ರಸಾದವ ಮುಟ್ಟಿ ಪ್ರಸಾದವಾದರು, ಲಿಂಗವ ಮುಟ್ಟಿ ಲಿಂಗವಾದರು ನಿಮ್ಮ ಮುಟ್ಟಿ ನೀವಾದರು— **ಶ್ರೀ ಸಿದ್ಧಲಿಂಗ ಸ್ವಾಮಿಗಳು.**

ಪೂರ್ವಾಶ್ರಮದಲ್ಲಿ ವಿಶ್ವನಾಥ. ಜನ್ಮಸ್ಥಳ ಮಾಗಡಿ ತಾಲ್ಲೂಕು ಕಂಚುಗಲ್ಲು ಬಂಡೆ ಮಠ. ತಂದೆ ತಾಯಿಗಳು ಬಸವ ಭಕ್ತರು. ಸುಸಂಸ್ಕೃತರು. ಕೃಷಿಕೃತ್ಯ ಪವಿತ್ರ ಕಾಯಕ. ತಂದೆ ಕೈ॥ ಶ್ರೀ ಸದಾಶಿವಯ್ಯ ತಾಯಿ ಶ್ರೀ ಶಿವರುದ್ರಮ್ಮ. ಬಂಡೇಮಠದ ನಿಷ್ಠಾವಂತ ಶಿಷ್ಯತ್ವ. ಪ್ರಾಥಮಿಕ, ಮಾಧ್ಯಮಿಕ ವಿದ್ಯಾಭ್ಯಾಸವೆಲ್ಲ ಬಂಡೇಮಠದಲ್ಲಿ. ಪ್ರೌಢವಿದ್ಯಾಭ್ಯಾಸ ಕನಕಪುರದೇಗುಲ ಮಠದಲ್ಲಿ. ಲಿಂಗೈಕ್ಯ ಪೂಜ್ಯ ಶ್ರೀ ಮಹಾಲಿಂಗ ಸ್ವಾಮಿಗಳವರ ಪೂಜೆಗೆ ಪತ್ರೆ ಪುಷ್ಪ ಎತ್ತುವ ಕಾಯಕ ಒಡನಾಡಿಗಳೊಂದಿಗೆ ಮೃದುವಾಗಿ ವ್ಯವಹರಿಸುವ ಸ್ವಭಾವ. ಮಿತಭಾಷಿ. ಎಲ್ಲರಿಗೆ ಮೆಚ್ಚು ಕಾಲೇಜಿನ ವ್ಯಾಸಂಗಕ್ಕಾಗಿ ಶ್ರೀ ಸಿದ್ಧಗಂಗಾ ಮಠಕ್ಕೆ ಪ್ರಯಾಣ. ಚಿಕ್ಕಂದಿನಿಂದಲೇ ಶ್ರೀ ಮಠದೊಂದಿಗೆ ಬಾಂಧವ್ಯ. ಅದೂ ಪರಮ ಪೂಜ್ಯ ಶ್ರೀ ಶ್ರೀ ಗಳ ಸೇವೆ ಮಾಡಬೇಕೆಂಬ ಹಂಬಲ „ಬರುವುದೇನುಂಟೊಮ್ಮೆ ಬರುವ ಕಾಲಕೆ ಬಹುದು, ಬಯಕೆ

ಬರುವುದರ ಕಣ್ ಸನ್ನೆ ಕಾಣೋ"—ಎಂಬ ಮಧುರ ಚನ್ನರ ಮಾತು ವಿಶ್ವನಾಥನ ಬಾಳಿಗೆ ಬೆಳಕಾಗಿ ಬಂಧಿತು. ಶ್ರೀ ಮಠದಲ್ಲಿ ಸಂಸ್ಕೃತ ವಿದ್ಯಾಭ್ಯಾಸಕ್ಕೆ ದೊರೆತ ಅವಕಾಶ. ಪೂಜ್ಯ ಶ್ರೀ ಶ್ರೀಗಳವರ ಸೇವೆ ಮಾಡುವ ಪುಣ್ಯ. ಮಡಿಯೊಗೆಯುವ. ಪೂಜೆಗಿಡುವ, ಸಮಯ ಸಂಪ್ರದಾಯಗಳನ್ನು ತಿಳಿಯುವ ಅಪೂರ್ವ ಅವಕಾಶ ಲಭ್ಯ. ಎಂದೂ ಯಾರಿಗೂ ಕಾಣಿಸಿ ಕೊಳ್ಳದೆ ಒಳಗೊಳಗೇ ಅರಳುತ್ತಿದ್ದ ಶಿವಭಾವ ಗುರ ವಿಗೆ ತನುಸವೆಸುವಲ್ಲಿ ಸಂತೋಷ. ಮನಮುಟ್ಟುವಲ್ಲಿ ಆನಂದ. ಬಸವಾದಿ ಶರಣರು ವಚನಗಳನು ಅಧ್ಯಯನ ಮಾಡಬೇಕೆಂಬ ತವಕ. ಪರಮ ಪೂಜ್ಯ ಶ್ರೀ ಶ್ರೀಗಳ ವರ ಸಾನಿಧ್ಯ ಬಯಸಿ ಬರುವ ಅಸಂಖ್ಯಾತ ಅನುಭವಿಗಳ, ಮಠಾಧೀಶರ, ಸರಣರ ಅಧಿಕಾರಿಗಳ, ಭಕ್ತರ, ಭಾವುಕರ, ಬಾಲಕರ, ಪರಿಚಯ ಲಾಭ. ಎಲ್ಲರೊಂದಿಗೆ ಸ್ನೇಹ ವಿಶ್ವಾಸಗಳಿಂದ ಬೆರೆಯುವ ಸ್ವಭಾವ. ನಗು ಸದಾ ಮುಖದ ಮೇಲೆ. ಎಂದೂ ಯಾರನ್ನೂ ಕಟುವಾಗಿ ಮಾತನಾಡದ ಪ್ರವೃತ್ತಿ. ವೇದಾಧ್ಯಯನ. ಕಂಚಿನ ಕಂಠ, ಸೌಮ್ಯತೆಗೆ ಇನ್ನೊಂದು ರೂಪ. ಇನ್ನೂ ಕಲಿಯ ಬೇಕೆಂಬ ಆಸೆ.ಕಾಲ ಕೂಡಿ ಬಂದಿತು. 'ವಿಶ್ವನಾಥ--ಸಿದ್ಧಲಿಂಗ' ವಾಗುವ ಪುಣ್ಯ ಮುಹೂರ್ತ. ಶ್ರೀ ಮಠದ ಪ್ರಕರಣ ಗುರುಕೃಪೆ ಯಾಗಿ ಹರಸಿತು. ಕಾರುಣ್ಯ ಕಿರಣವನ್ನು ಲೋಕಕ್ಕೆ ಬೀರಿತು. ತುಂಬ ಮನದ ಬಿಂಬವೆನಿಸಿತು

ಶ್ರೀ ಸಿದ್ಧಲಿಂಗ ಸ್ವಾಮಿಗಳು ಶ್ರೀ ಮಠದ ಉತ್ತರಾಧಿಕಾರಿಗಳು. ಅವರ ಹಿಂದೆ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಅಖಂಡ ತಪಸ್ಸಿನ ಶ್ರೀ ರಕ್ಷೆ. ಎಳೆಯ ಹೆಗಲಿಗೆ ಶಿವ ಶ್ರೀಮಂತಿಕೆಯ ಅನುಭವದ ಆಶೀರ್ವಾದ. ಭಕ್ತ ಜಗತ್ತಿನ ತುಂಬುಹೃದಯದ ಸ್ವಾಗತೋತ್ಸಾಹ. ಶ್ರೀ ಸಿದ್ಧಗಂಗಾ ಮಠದ ಪವಿತ್ರ ಪರಂಪರೆಯನ್ನು ಕಾಪಾಡಿ ಕೊಂಡು ಬರುವ ಅಚಲ ಸಂಕಲ್ಪ ಕಾಯಕ–ದಾಸೋ ಹಗಳ ನಿರಂತರ ಕೈಂಕರ್ಯ ಮಣಿಪ ಮುಂದುವರಿಸುವ ಆತ್ಮ ವಿಶ್ವಾಸ. ಭವಿಷ್ಯದಲ್ಲಿ ಮಂಗಳ ರೂಪಿಯಾಗಿ ಅರಳುವ ವಿಶ್ವಾಸ ಮೂಡಿಸುವರಾಗಿದ್ದಾರೆ. ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು. "ಶಿವ ಪಥವರಿವೊಡೆ ಗುರು ಪಥವೆ ಮೊದಲು" ಎಂಬುದು ಶ್ರೀ ಶ್ರೀಗಳ ನಿತ್ಯ ಜಪ, ಮಾಡುವ ಲಿಂಗಪೂಜೆ.

ಪೂಜ್ಯ ಶ್ರೀ ಸಿದ್ಧ ಲಿಂಗಸ್ವಾಮಿಗಳನ್ನು ಶ್ರೀ ಸಿದ್ಧಗಂಗಾ ಮಠದ ಉತ್ತರಾಧಿ ಕಾರಿಗಳನ್ನಾಗಿ ಆಶೀರ್ವದಿಸಿದ ಪರಮ ಪೂಜ್ಯ ಶ್ರೀ ಶ್ರೀ-ಶಿವಕುಮಾರ ಮಹಾ ಸ್ವಾಮಿ ಗಳವರು ತಳೆದ ದಿಟ್ಟ ನಿಲವನ್ನು, ಚರಿತಾರ್ಹವಾದ ನಿರ್ಣಯವನ್ನು ಬೆಂಬಲಿಸಿ ಬರುತ್ತಿರುವ ಅಸಂಖ್ಯಾತ ಪತ್ರಗಳು ಶ್ರೀ ಮಠದ ಶಕ್ತಿ ಸಂಕೇತಗಳಾ ಗಿವೆ. ಪತ್ರಬರೆಯುತ್ತಿರುವ ಎಲ್ಲರಿಗೆ ಕೃತಜ್ಞ ಪೂರ್ವಕವಾಗಿ "ಸಿದ್ಧಗಂಗಾ" ಶರಣು ಸಮರ್ಪಿಸುತ್ತದೆ.

## ಆರೋಗ್ಯ ರಹಸ್ಯ-೪

ಮಹಾತ್ಮ ಗಾಂಧಿ

### ಆಹಾರ

ಕೆನೆತೆಗೆದ ಹಾಲೋ ಕೆನೆ ತೆಗೆಯದ ಹಾಲೋ ಅಲ್ಲದೆ, ದೇಹಕ್ಕೆ ಇತರ ವಸ್ತುಗಳೂ ಅಗತ್ಯ. ಗೋಧಿ, ಅಕ್ಕಿ ಜೋಳ, ಸಜ್ಜೆ ಮುಂತಾದ ಧಾನ್ಯಗಳಿಗೆ ನಾನು ಎರಡನೆ ಸ್ಥಾನ ಕೊಡುತ್ತೇನೆ. ಇವು ಪ್ರಧಾನ ಆಹಾರ ಪದಾರ್ಥಗಳಾಗಿ ಉಪಯೋಗಿಸಲ್ಪಡುತ್ತಿವೆ. ಭಾರತದ ಬೇರೆ ಬೇರೆ ಪ್ರಾಂತಗಳಲ್ಲಿ ಬೇರೆ ಬೇರೆ ಧಾನ್ಯಗಳನ್ನು ಮುಖ್ಯಾಹಾರವಾಗಿ ಉಪಯೋಗಿಸುತ್ತಾರೆ. ಅನೇಕ ಕಡೆಗಳಲ್ಲಿ ಬೇರೆ ಬೇರೆ ಬಗೆಯ ಧಾನ್ಯಗಳನ್ನು ಒಟ್ಟಿಗೇ ಉಪಯೋಗಿಸುತ್ತಾರೆ. ಉದಾಹರಣೆಗೆ: ಸ್ವಲ್ಪ ಗೋಧಿ, ಸ್ವಲ್ಪ ಅಕ್ಕಿ, ಸಲ್ಪ ಸಜ್ಜೆ, ಮೂರನ್ನೂ ಒಟ್ಟಿಗೆ ಬಡಿಸುತ್ತಾರೆ. ಈ ಮಿಶ್ರಣ ನಮ್ಮ ದೇಹಪೋಷಣೆಗೆ ಅಗತ್ಯವಲ್ಲ. ಇದರಿಂದ ಆಹಾರ ಸೇವನೆಯ ಪ್ರಮಾಣವನ್ನು ಗೊತ್ತು ಮಾಡುವುದು ಕಷ್ಟವಾಗಿ, ಜೀರ್ಣಿಸಿಕೊಳ್ಳಲು ಹೆಚ್ಚು ಶ್ರಮವಾಗುತ್ತದೆ. ಇವೆಲ್ಲವೂ ಪಿಷ್ಟವನ್ನು ಮಾತ್ರ ಒದಗಿಸುತ್ತವೆ. ಒಂದೊಂದನ್ನೇ ಒಂದು ಸಲ ಉಪಯೋಗಿಸಿದರೆ ಒಳ್ಳೆಯದು. ಗೋಧಿಯೆ ಧಾನ್ಯಗಳಲ್ಲಿ ರಾಜ ಎನ್ನಬಹುದು. ಜಗತ್ತಿನ ನಕ್ಷೆಯನ್ನು ನೋಡಿದರೆ. ಗೋಧಿಯು ಅಗ್ರಸ್ಥಾನ ಕಾಣಬರುತ್ತದೆ. ಆರೋಗ್ಯದ ದೃಷ್ಟಿಯಿಂದ ಗೋಧಿಯಿದ್ದರೆ ಅಕ್ಕಿಯಾಗಲಿ ಇತರ ಧಾನ್ಯಗಳಾಗಲಿ ಅನಾವಶ್ಯಕ. ಗೋಧಿ ಸಿಗದಿದ್ದರೆ ಅಕ್ಕಿಯನ್ನೇ ಆಶ್ರಯಿಸಬೇಕು.

ಧಾನ್ಯಗಳನ್ನು ಚೆನ್ನಾಗಿ ಶುದ್ಧಿಮಾಡಿ, ಕಲ್ಲಿನಲ್ಲಿ ಬೀಸಿ ಬಂದ ಹಿಟ್ಟನ್ನು ಉಪಯೋಗಿಸಬೇಕು. ಹಿಟ್ಟನ್ನು ಜರಡಿಯಾಡಬಾರದು. ಇದರಿಂದ ಭೂಸಾ ಅಥವಾ ಬೀಜಕೋಶ ನಷ್ಟವಾಗುತ್ತದೆ. ದೇಹ ಪೋಷಣೆಗೆ ಅತ್ಯಗತ್ಯವಾದ ಲವಣಗಳು, ಅನ್ನಾಂಗಗಳೂ ಇರುವುದು ಅದರಲ್ಲಿಯೇ. ಕರುಳಿನ ಕೆಲಸಕ್ಕೆ ಸಹಾಯಕವಾದ ನಾರನ್ನೂ ಇದುಕೊಡುತ್ತದೆ. ಅಕ್ಕಿಯ ಕಾಳು ಬಹು ಸೂಕ್ಷ್ಮವಾದುದರಿಂದ, ನಿಸರ್ಗ ಅದರ ಸುತ್ತಲೂ ಹೊದಿಕೆಯ ಹಾಗೆ ಹೊಟ್ಟನ್ನು ಕೊಟ್ಟಿದೆ. ಇದನ್ನು ತಿನ್ನಲಾಗುವುದಿಲ್ಲ. ಈ ತಿನ್ನಲಾಗದ ಭಾಗವನ್ನು ತೆಗೆಯಲು ಭತ್ತವನ್ನು ಕುಟ್ಟಬೇಕು ಹೊಟ್ಟು ಕಳಚುವಷ್ಟು ಮಾತ್ರ ಕುಟ್ಟಬೇಕು. ಯಂತ್ರಗಳಲ್ಲಿ ಕುಟ್ಟಿಸುವುದರಿಂದ

ಡಿದ ಅಕ್ಕಿಯ ಜನಪ್ರಿಯತೆಗೆ ಕಾರಣ. ಅದನ್ನು ತೆಗೆಯದೆ ಇದ್ದ
ಅಕ್ಕಿಗೆ ಬೇಗ ಹುಳು ಹಿಡಿಯುತ್ತದೆ. ಸಯಮಾಡಿದ ಅಕ್ಕಿ, ಹೊಟ್ಟು ಇಲ್ಲದ
ಗೋಧಿ, ನಮಗೆ ಬರೀಪಿಷ್ಟವನ್ನು ಒದಗಿಸುತ್ತವೆ. ಜೀವಕೋಶವನ್ನು ಕಳೆದರೆ
ಧಾನ್ಯದಲ್ಲಿ ಮುಖ್ಯ ಅಂಶವೇ ನಷ್ಟವಾಯಿತು. ಅಕ್ಕಿಯ ತೌಡನ್ನು ಪ್ರತ್ಯೇಕವಾಗಿ
ಮಾರುತ್ತಾರೆ. ಅಕ್ಕಿಯ ತವುಡನ್ನೂ ಗೋಧಿಗೆ ಹೊಟ್ಟನ್ನೂ ಬೇಯಿಸಿ ತಿನ್ನಬಹುದು.
ಇವುಗಳಿಂದ ಚಾಪಾತಿ, ರೊಟ್ಟಿಗಳನ್ನು ಮಾಡಬಹುದು. ಹೆಚ್ಚಾಗಿ ಕುಟ್ಟಿದ ಅಕ್ಕಿ
ಗಿಂತ ಅಕ್ಕಿಹಿಟ್ಟಿನ ಚಪಾತಿಯೇ ಸುಲಭವಾಗಿ ಜೀರ್ಣವಾಗಬಹುದು. ಹಾಗೆ ಬಳ
ಸಿದಾಗ ಸ್ವಲ್ಪತಿಂದರೂ ಹೊಟ್ಟೆತುಂಬೀತು.

ಚಪಾತಿಯ ಚೂರನ್ನು ಕಾಯಿಪಲ್ಯದಲ್ಲೋ ಬೇಳೆಯ ಸಾರಿನಲ್ಲೊ ಅದ್ದಿ
ತಿನ್ನುವುದು ನಮಗೆ ವಾಡಿಕೆ. ಇದರಿಂದಾಗಿ ಅನೇಕರು ಸರಿಯಾಗಿ ಅಗಿಯದೆಯೆ
ಆಹಾರವನ್ನು ನುಂಗುತ್ತಾರೆ. ಆಹಾರ ಪಚನದಲ್ಲಿ ಅದರಲ್ಲೂ ಪಿಷ್ಟಪದಾರ್ಥಗಳ
ಪಚನದಲ್ಲಿ, ಅಗಿಯುವುದು ಮುಖ್ಯ ಕಾರ್ಯ. ಪಿಷ್ಟ ಜೀರ್ಣಿಸುವುದು ಬಾಯಿಯಲ್ಲಿ
ಜೊಲ್ಲುರಸದೊಡನೆ ಬೆರೆತಾಗಲೇ ಆರಂಭ ಅಗಿಯುವುದರಿಂದ ಆಹಾರ ಜೊಲ್ಲಿ
ನೊಡನೆ ಚೆನ್ನಾಗಿ ಬೆರೆಯುತ್ತದೆ. ಆದುದರಿಂದ ಪಿಷ್ಟ ಪದಾರ್ಥಗಳನ್ನು ಸ್ವಲ್ಪ
ಗಟ್ಟಿಯಾಗಿಯೆ, ಒಣಕಲಾಗಿಯೇ ತಿನ್ನಬೇಕು. ಇದರಿಂದ ಜೊಲ್ಲಿನ ರಸ ಹೆಚ್ಚಿಗೆ
ಉತ್ಪತ್ತಿಯಾಗಿ. ಪದಾರ್ಥವನ್ನು ಚೆನ್ನಾಗಿ ಅಗಿಯಲೇ ಬೇಕಾಗುತ್ತದೆ.

ಪಿಷ್ಟವನ್ನು ಒದಗಿಸುವ ಧಾನ್ಯಗಳನಂತರ ಸಸಾರಜನಕಗಳನ್ನೊದಗಿಸುವ
ಬೇಳೆಗಳು ಬರುತ್ತವೆ–ಹುರುಳಿ, ಅವರೆ ಇತ್ಯಾದಿ. ಸಾಮಾನ್ಯವಾಗಿ ಪ್ರತಿಯೊಬ್ಬನೂ
ಬೇಳೆಗಳು ಆಹಾರದ ಮುಖ್ಯಾಂಶವೆಂದು ಭಾವಿಸುತ್ತಾನೆ. ಮಾಂಸಾಹಾರಿಗಳಿಗೂ
ಬೇಳೆ ಬೇಕು. ಕಷ್ಟವಾದ ದೇಹಶ್ರಮ ಮಾಡುವವರಿಗೆ, ಹಾಲು ತೆಗೆದುಕೊಳ್ಳಲಾ
ಗದವರಿಗೆ, ಬೇಳೆಯಿಲ್ಲದಿದ್ದರೆ ಸಾಧ್ಯವಿಲ್ಲ ಎಂಡರೆ ಸುಲಭವಾಗಿ ಒಪ್ಪಬಹುದು.
ಆದರೆ ಗುಮಾಸ್ತರು ವ್ಯಾಪಾರಿಗಳು ವಕೀಲರು ವೈದ್ಯರು, ಉಪಾಧ್ಯಾಯರು ಮುಂತಾದ
ಕುಳಿತದಲ್ಲಿಯೇ ಕೆಲಸಮಾಡುವವರಿಗೆ' ಹಾಲನ್ನು ಕೊಳ್ಳಲಾರದಷ್ಟು ಬಡವರಾದವ
ವರಿಗೆ, ಬೇಳೆಗಳು ಅಗತ್ಯವಲ್ಲವೆಂದು ನಿಸ್ಸಂದೇಹವಾಗಿ ನಾನು ಹೇಳಬಲ್ಲೆ. ಬೇಳೆ
ಜೀರ್ಣವಾಗುವುದು ಕಷ್ಟವೆಂದು ಹೇಳುತ್ತಾರೆ. ಧಾನ್ಯಗಳಿಗಿಂತ ಬೇಳೆಯ ಉಪಯೋ
ಗ ಕಡಿಮೆ. ಬೇಳೆಗಳಲ್ಲಿ ಬಟಾಣಿ, ಕಡಲೆ, ಹುರುಳಿ ಜೀರ್ಣಿಸಿಕೊಳ್ಳಲು ಅತಿ
ಸುಲಭವೆಂದೂ ಪರಿಗಣಿತವಾಗಿವೆ.

(ಮುಂದುವರಿಯುತ್ತದೆ)

# ಶ್ರೀ ಕ್ಷೇತ್ರದಲ್ಲಿ ಸಹ ಬಾಳ್ವೆ

ಟಿ.ಎಂ ರಾಜೇಶ್ವರಯ್ಯ.
ಸಹ ಶಿಕ್ಷಕರು, ಶ್ರೀ ಬಸವೇಶ್ವರ ಪ್ರಾಥಶಾಲೆ ಶ್ರೀ ಸಿದ್ಧಗಂಗಾ ಮಠ.

ಒಂದೇ...... ಒಂದೇ ...... ಒಂದೇ........
ನಾವುಗಳೆಲ್ಲರು ಒಂದೇ.................. ||ಪ||

ಬಾಳಲಿ ಬದುಕೋಣವೆಂದು, ನಾವುಗಳ್ ಸೇರಿಹೆ ವಿಂದು.
ಬಡವರ ಮಕ್ಕಳಿಗಾಗಿ, ಶ್ರೀ ಕ್ಷೇತ್ರವು ಇದೆ ತಾನಾಗಿ.
ಜಾತಿ ಭೇದವು ಇಲ್ಲಾ, ಒಟ್ಟಾಗಿ ಸೇರಿಹೆವೆಲ್ಲಾ.
ಒಂದೇ .. ಒಂದೇ....ಒಂದೇ ... ನಾವುಗಳೆಲ್ಲರು ಒಂದೇ....... ||೧||

ಭಾರತ ಮಾತೆಯ ಪುತ್ರರು ನಾವು. ಒಟ್ಟಾಗಿ ಸೇರಿಹೆ ವಿಲ್ಲೀ....
ನಾನಾ ಭಾಗದಿ ಬಂದಿಹ ನಾವು. ಒಟ್ಟಾಗಿ ಬಾಳುವೆ ವಿಲ್ಲೀ—-....
ನಾನಾ ಸೀಮೆಯ ಮಕ್ಕಳು ನಾವು. ಒಂದಾಗಿ ಬೆರೆಯುವೆ ವಿಲ್ಲೀ.
ಒಂದೇ .. ಒಂದೇ .. ಒಂದೇ,... ನಾವುಗಳೆಲ್ಲರು ಒಂದೇ... ||೨||

ಬಡವ ಬಲ್ಲಿದ ಎಂಬ, ಭೇದವು ನಮ್ಮೊಳಗಿಲ್ಲ.
ಮೇಲು ಕೀಳು ಎಂಬ ಭಾವನೆ ತೊರೆದಿಹೆವೆಲ್ಲಾ.
ಎಲ್ಲರು ಸಮಾನರೆಂಬ ಭಾವನೆ ಇದೆ ನಮಗೆಲ್ಲಾ.
ಒಂದೇ ...ಒಂದೇ....ಒಂದೇ ನಾವುಗಳೆಲ್ಲರು ಒಂದೇ........ ||೩||

ಬಾಳಲಿ ಏನೇ ಬರಲಿ ನಮ್ಮಲಿ ಒಗ್ಗಟ್ಟಿರಲಿ.
ಎಲ್ಲರೂ ಒಂದಾಗಿ ಬೆರೆತು ಕೈ ಕೈ ಕೂಡಿಸಿ ಕಲೆತು.
ಬಾಳೋಣ ಬನ್ನಿ ಇಂದು ಸಾಗೋಣ ಬನ್ನಿ ಮುಂದು.
ಒಂದೇ....ಒಂದೇ....ಒಂದೇ.... ನಾವುಗಳೆಲ್ಲರು ಒಂದೇ........ ||೪||

ಶ್ರೀ ಕ್ಷೇತ್ರದ ಮಕ್ಕಳ ಏಳಿಗೆಗಾಗಿ ಹಗಲಿರುಳೆನ್ನದೆ ದುಡಿಯುವತ್ಯಾಗಿ
ಇತರರ ಹಿತವನು ಬಯಸುವ ಯೋಗಿ ಇವರೇ ಶ್ರೀ ಶಿವಕುಮಾರ ಯೋಗಿ.
ಶ್ರೀ ಕ್ಷೇತ್ರದ ಮಹಿಮ ಈಬೈರಾಗಿ ಇವರಲ್ಲಿಹ ಬಯಕೆಯು ಒಂದೆ
ಒಂದೇ...ಒಂದೇ....ಒಂದೇ........ ನವೆಲ್ಲರ ಏಳಿಗೆ ಒಂದೇ........... ||೫||

(ಮುಂದುವರೆದಿದೆ)

# ಕನ್ನಡ ಸಾಹಿತ್ಯ-ಸಂಸ್ಕೃತಿ ಮತ್ತು ಸಂಶೋಧನ ಕ್ಷೇತ್ರದ ದಿಗ್ಗಜಯುಗಳಲ್ಲಿ ಒಂದಾಗಿದ್ದ.

## ಶ್ರೀ ಹೆಚ್. ದೇವೀರಪ್ಪನವರ ಕಣ್ಮರೆ.

ಪ್ರೊ. ಚನ್ನಪ್ಪ ಎರೇಸೀಮೆ.

ಕಿರಿಯ ವಿದ್ವಾಂಸರಿಂದ ವ್ಯವಸ್ಥಾಬದ್ಧವಾಗಿ, ಅಚ್ಚುಕಟ್ಟಾಗಿ ಕೆಲಸ ತಕೊಳ್ಳುವುದರಲ್ಲಿ ಅನೇಕ ಸಲ ಶ್ರೀಯುತರು ನೈಷ್ಠುರ್ಯಕ್ಕೂ ಪಾತ್ರರಾಗುತ್ತಿದ್ದರು. ಆದಕ್ಕೆ ಅವರು ಅಂಜದೆ ಅಳುಕದೆ ಶಿಸ್ತಿನ ಸಿಪಾಯಿಯಂತೆ ವರ್ತಿಸಿದುದರ ಫಲವಾಗಿ ಸಂಸ್ಥೆ ಗುರಿ ಮೀರಿ ಯಶಸ್ಸನ್ನು ಸಾಧಿಸಿತು. ಸ್ವತಃ ತಾವು ಸತತ ಶ್ರಮವಹಿಸಿ, ಸಂಶೋಧನಾ ಮಾರ್ಗದಲ್ಲಿ ದುಡಿದು ತಾವು ಬೆಳೆದು ಸಂಸ್ಥೆಯನ್ನು ಬೆಳಸಿದರೆಂದು ಇಂದಿಗೂ ಅವರ ಕೈಕೆಳಗೆ ಕೆಲಸ ಮಾಡಿದ ವಿದ್ವಾಂಸರು ಅವರನ್ನು ಮುಕ್ತ ಕಂಠದಿಂದ ಹೊಗಳುತ್ತಿದ್ದಾರೆ. ಈಗ ಬೆಂಗಳೂರು ಕೃಷಿ ವಿದ್ಯಾಲಯದಲ್ಲಿ ಕನ್ನಡ ವಿಭಾಗದ ಮುಖ್ಯರೂ, ಪ್ರಾಧ್ಯಾಪಕರೂ ಆಗಿರುವ ಶ್ರೀಯುತ ಹ.ಕ. ನರಸಿಂಹೇಗೌಡರು " ಶ್ರೀ ದೇವೀರಪ್ಪನವರ ಮಾರ್ಗದರ್ಶನದಲ್ಲಿ ಕೆಲಸ ಮಾಡಿದ ನಾನು ಅವರ ಶಿಸ್ತು ಕರ್ತವ್ಯ ನಿಷ್ಠೆ ಮತ್ತು ಪ್ರಾಮಾಣಿಕತೆಗೆ ಮಾರು ಹೋಗಿದ್ದೇನೆ. " ಎನ್ನುತ್ತಾರೆ " ಕೆಲಸ ಮಾಡದ ಸೋಮಾರಿ ವಿದ್ವಾಂಸರಿಗೆ ದೇವೀರಪ್ಪನವರು ಕಠಿಣರಾಗಿ ತೋರುತ್ತಿದ್ದರಲ್ಲದೆ, ಕೆಲಸ ಮಾಡುವವರಿಗೆ ಸ್ನೇಹಿತರಾಗಿ ಬಿಡುತ್ತಿದ್ದರು. ಅವರ ಶಿಸ್ತು, ಕರ್ತವ್ಯ ನಿಷ್ಠೆ, ಶ್ರದ್ಧಾದಿಗಳು ನಮಗೆ ವರ್ತನೋಪದೇಶಗಳೇ ಆಗಿ ಹೋದವು. ಶಾಸ್ತ್ರೀಯವಾಗಿ ಗ್ರಂಥ ಸಂಪಾದನೆ ಮಾಡುವ ರೀತಿ ನೀತಿಗಳನ್ನು ಬಹು ಮಮತೆಯಿಂದ ನಮಗೆಲ್ಲ ಕಲಿಸಿ, ಕೆಲಸಕ್ಕೆ ತೊಡಗಿಸಿ, ಕಾಲಕಾಲಕ್ಕೆ ನಮ್ಮ ಕೆಲಸಗಳನ್ನು ನಿರೀಕ್ಷಿಸಿ, ಸೂಕ್ತ ಸಲಹೆ ಕೊಡುತ್ತಿದ್ದ ಫಲವಾಗಿ ನಾವೂ ಬಹಳಷ್ಟು ಬೆಳೆದೆವು " ಎನ್ನುತ್ತಾರೆ ಶ್ರೀ ಗೌಡರು.

ಶ್ರೀ ದೇವೀರಪ್ಪನವರಿಗೆ ಸದಾ ತಮ್ಮ ಸಂಸ್ಥೆಯ ಉತ್ಕರ್ಷದ ಚಿಂತೆ ಮೌಲಿಕವಾದ ಗ್ರಂಥ ಪ್ರಕಟಣೆಯ ಚಿಂತೆಯಿರುತ್ತಿತ್ತಲ್ಲದೆ ಇನ್ನಿತರ ವ್ಯವಹಾರದಿಂದ ಅವರು ಬಹುದೂರ ಇರುತ್ತಿದ್ದರು. ಎಷ್ಟೋ ವೇಳೆ ಅವರು ತಮ್ಮ ಮನೆಮಠಗಳ ಚಿಂತೆಯನ್ನು ಮರೆಯುತ್ತಿದ್ದರು. ಪ್ರತಿದಿನ ಎಲ್ಲ ನೌಕರರೂ ಬರುವುದಕ್ಕೆ ಅರ್ಧಘಂಟೆ ಮುಂಚಿತವಾಗಿಯೇ ಬಂದು ಸಂಸ್ಥೆಯ ಸುತ್ತ ಮುತ್ತ ತಿರುಗಾಡಿ ಪರಿಸರ ಪರೀಕ್ಷಿಸಿ, ತಮ್ಮ ಕಛೇರಿಯಲ್ಲಿ ಆಸೀನರಾಗಿರುತ್ತಿದ್ದರು ಈ ಕಾರಣವಾಗಿ

ಎಲ್ಲ ನೌಕರರೂ ಸದಾ ಜಾಗೃತರಾಗಿ ಸಕಾಲದಲ್ಲಿ ಆಫೀಸಿಗೆ ಬರುತ್ತಿದ್ದರು. ತಡವಾಗಿ ಬಂದವರು ಯಾರೇ ಇರಲಿ ಸೂಕ್ತಕಾರಣ ಕೊಡದಿದ್ದರೆ ವಾಗ್ದಂಡನೆ ತಪ್ಪುತ್ತಿರಲಿಲ್ಲ. ಅಂಥವರಿಗೆ ರಜೆ ಕೊಟ್ಟು ಮನೆಗೆ ಕಳಿಸಿಕೊಟ್ಟ ಉದಾಹರಣೆಗಳೂ ಉಂಟು. ಈ ನ್ಯಾಯ ನೈಷ್ಠುರ್ಯ ಗುಣದ ಕಾರಣವಾಗಿ ಒಮ್ಮೊಮ್ಮೆ ಅವರು ಲೋಕಕ್ಕೆ ಕಠಿಣ ವಾಗಿ ಕಂಡಿರಬಹುದು. ಅದಕ್ಕೆ ಅವರು ಕೊಂಚವೂ ಹೆದರುತ್ತಿರಲಿಲ್ಲ. ದೇವೀರಪ್ಪ ನವರು ಕಠಿಣಹೃದಯದವರಲ್ಲ, ಮೃದು ಹೃದಯವುಳ್ಳವರು, ಸುಸಂಸ್ಕೃತರು, ಪರರ ಕಷ್ಟಕ್ಕಾಗಿ ಮರುಗುವ ಮಾನವೀಯತೆಯವರು. ಆಫೀಸಿನ ವೇಳೆ ಮುಗಿದ ಮೇಲೆ ಎಲ್ಲರೊಡನೆ ಒಂದಾಗಿ ಸರಸ ಮಾತುಕತೆಯಲ್ಲಿ ತಾವೂ ನಕ್ಕು, ಉಳಿದವರನ್ನೂ ನಗಿಸುತ್ತಿದ್ದರು. ಈ ಕಾರಣವಾಗಿ ಅವರ ನೈಷ್ಠುರ್ಯ ವರ್ತನೆಯಿಂದ ನೊಂದವರೂ ಅದನ್ನು ಮರೆತು ಮನೆಗೆ ತೆರಳುತ್ತಿದ್ದರು.

ಪ್ರತಿದಿನ ಸಹಾಯಕ ಸಂಶೋಧಕರ ಡೈರಿಯನ್ನು ಪರಿಶೀಲಿಸದೇ ಇರುತ್ತಿರ ಲಿಲ್ಲ. ಪ್ರತಿಯೊಬ್ಬರನ್ನೂ ಆಫೀಸಿಗೆ ಕರೆಸಿ ಆಗಬೇಕಾದ ಕಾರ್ಯವನ್ನು ತನಿಖೆ ಮಾಡಿ ತೃಪ್ತಿಕರವಾಗಿ ಕೆಲಸವಾಗದಿದ್ದರೆ ಕಾರಣಕೇಳುತ್ತಿದ್ದರು. ಆಗಿದ್ದರೆ ತೃಪ್ತಿ ವ್ಯಕ್ತ ಪಡಿಸಿ ಬೇಗ ಬೇಗ ಕಾರ್ಯ ಮುಗಿಸುವಂತೆ ಹೇಳಿ ಕಳುಹಿಸುತ್ತಿದ್ದರು. ಸಂಶೋಧನೆ ಯಲ್ಲಿ ಬಂದ ತೊಡಕನ್ನೇಆಗಲಿ, ಚರ್ಚಾಸ್ಪದ ವಿಷಯವನ್ನೇ ಆಗಲಿ ಆಯಾಯ ವಿದ್ವಾಂಸರೊಡನೆ ತಮ್ಮ ಆಫೀಸಿನಲ್ಲಿ ಚರ್ಚಿಸಿ ಸೂಕ್ತಸಲಹೆ ಸಹಕಾರ ಕೊಡಲು ಶ್ರೀ ದೇವೀರಪ್ಪನವರು ಸದಾ ಜಾಗೃತರಾಗಿಯೇ ಕಾರ್ಯಗೌರವದಲ್ಲಿ ಮುಳುಗಿರು ತ್ತಿದ್ದರೆಂದು. ಅಲ್ಲಿ ರೀಸರ್ಚ್ ಅಸಿಸ್ಟೆಂಟ್ ಪಂಡಿತ ಎಸ್. ಬಸಪ್ಪನವರು, ಸಣ್ಣಯ್ಯ ನವರು ಬಹಳವಾಗಿ ಅವರನ್ನು ಕೊಂಡಾಡುತ್ತಿದ್ದರು. ಶಿವತತ್ವಚಿಂತಾಮಣಿ "ಗ್ರಂಥ ವನ್ನು ಪಂ|| ಬಸಪ್ಪನವರು ಸಂಪಾದಿಸುತ್ತಿದ್ದ ಕಾಲದಲ್ಲಿ ಅನೇಕ ಸಂದೇಹಗಳಿಗೊ ಳಗಾದಾಗ, ಪಾಠಾಂತರಗಳ ನಿರ್ಣಯ ಮಾಡುವಾಗ ಸೂಕ್ತಮಾರ್ಗದರ್ಶನ ಮಾಡಿ ದ್ದಾರೆ. ಗ್ರಂಥ ಸಂಪಾದನೆಯ ತತ್ವವನ್ನು ನಮಗೆಲ್ಲ ಕಲಿಸಿಕೊಟ್ಟವರೇ ಅವರು. ಎಂದು ಅನೇಕಸಲ ನನ್ನೆದುರಿಗೆ ಹೇಳುತ್ತಿದ್ದರು ವೃತ್ತಿ ಗೌರವ, ಪ್ರಯತ್ನ ಶೀಲತೆ, ಸತತಾಭ್ಯಾಸ ಪ್ರಯತ್ನ, ಈ ಉತ್ತಮ ಗುಣಗಳು ನಮ್ಮಲ್ಲಿ ಅಳವಡುವ ಹಾಗೆ ಮಾಡಿದುದೇ ದೇವೀರಪ್ಪನವರ ವ್ಯಕ್ತಿತ್ವ. ಅವರ ಮನಸ್ಸು ಕಠಿಣವೆಂದರೆ ಕಠಿಣ; ಮೃದುವೆಂದರೆ ಮೃದು; ಕುಸುಮ ಕೋಮಲ ಮಾನವೀಯತೆಯ ಹೃದಯ ಅವ ರದು ಆದರೇ ಸೋಮಾರಿಗಳನ್ನು ಕಂಡರೆ ಅವರಿಗೆ ಆಗುತ್ತಿರಲಿಲ್ಲ.

ಅನೇಕ ಸಲ ನಮ್ಮನ್ನು ಹುಡುಕಿಕೊಂಡು ಯಾರಾದರೂ ಆಫೀಸಿಗೆ ಬಂದಾಗ ನಮ್ಮ ಕೆಲಸ ಬಿಟ್ಟು ಬಂದವರೊಡನೆ ಹರಟೆಕೊಚ್ಚುವುದಾಗಲಿ ಕಾಲ ಕಳೆಯುವು ದಾಗಲಿ ಸಾಧ್ಯವೇ ಇರಲಿಲ್ಲ ಹಾಗೆ ಅವಶ್ಯಕವೆಂದು ಕಂಡು ಬಂದರೆ ಬಂದವರ

ವಿಳಾಸ ಹೇಳಿ ದೇವೀರಪ್ಪನವರ ಅಪ್ಪಣೆ ಪಡೆದು ಹೊರಗಡೆ ಹೋಗಿ ಅವರೊಡನೆ ಮಾತನಾಡಿ ಅವರನ್ನು ಕಳಿಸಿಕೊಡಬೇಕಾಗುತ್ತಿತ್ತು. ಹೀಗಾಗಿ ಇಡೀ ಇನ್‌ಸ್ಟಿಟ್ಯೂಟ್ ಸದಾ ಸ್ತಬ್ಧವಾಗಿ, ಶಾಂತ ಗಂಭೀರವಾಗಿ ತನ್ನ ಸಂಶೋಧನ ಕಾರ್ಯಕ್ಕೆ ತಕ್ಕ ಸನ್ನಿವೇಶ ದಿಂದ ಕೂಡಿರುತ್ತಿತ್ತು. ಆಡಳಿತದಲ್ಲಿ ಇಂಥ ಓರ್ವ ಶಿಸ್ತಿನ ವ್ಯಕ್ತಿ ಇಂದು ಅಪರೂಪ. ಆಡಳಿತ ವ್ಯವಸ್ಥೆಯಲ್ಲಿ ಶಿಸ್ತಿನ ಅಭಾವದಿಂದ ಇಂದು ಅನೇಕ ಕಡೆ ರಾಷ್ಟ್ರೀಯ ಆರ್ಥಿಕ ನಷ್ಟದ ಪರಿಸ್ಥಿತಿಯುಂಟಾಗಿರುವುದನ್ನು ಕಾಣುತ್ತಿದ್ದೇವೆ. ದೇವೀರಪ್ಪನವರ ಕಟ್ಟುನಿಟ್ಟಿನ ಆಡಳಿತ ವ್ಯವಸ್ಥೆ ಒಗ್ಗದೆ ಕೆಲವರಿಂದ ನೈಷ್ಠುರ್ಯಕ್ಕೊಳಗಾದರೂ ಅದಕ್ಕೆ ಸೊಪ್ಪು ಹಾಕದೆ ತಮ್ಮ ಸ್ವಚ್ಛವಾದ ಅಡಳಿತವನ್ನು ತಮ್ಮ ಸೇವಾವಧಿಯ ಉದ್ದಕ್ಕೂ ಕಾಪಾಡಿಕೊಂಡು ಬಂದುದರಿಂದ ಅತಿ ಮಹತ್ವದ ಕೃತಿಗಳು ಅಧಿಕ ಸಂಖ್ಯೆಯಲ್ಲಿ ಸಂಸ್ಥೆಯಿಂದ ಪ್ರಕಟಗೊಂಡವು - ಎಂದು ಶ್ರೀ ಎಸ್. ಬಸಪ್ಪನವರು ವಿಶೇಷವಾಗಿ ಅವರ ಸಂಪರ್ಕ ಪಡೆದಿದ್ದ ನನ್ನೆದುರಿಗೆ ಹೇಳುತ್ತಿದ್ದುದು ಜ್ಞಾಪಕ. ಶ್ರೀಯುತ ಎನ್ ಬಸವಾರಾಧ್ಯರೂ, ಶ್ರೀ ಸಣ್ಣಯ್ಯನವರೂ ಅನೇಕ ವರ್ಷಗಳು ದೇವೀರಪ್ಪನವರ ಕೈಗೆಳಗೆ ಸಂಶೋಧನ ಕ್ಷೇತ್ರದಲ್ಲಿ ಕೆಲಸ ಮಾಡಿದ ಕಾರಣವಾಗಿ ಬಹಳಷ್ಟು ಅನುಭವ ಪ್ರಬುದ್ಧತೆ ಪಡೆದುದಾಗಿ ಕೃತಜ್ಞತೆ ವ್ಯಕ್ತಪಡಿಸುವವರಾಗಿದ್ದಾರೆ. ದೇವೀರಪ್ಪನವರ ಗರುಡಿಯಲ್ಲಿ ನುರಿತವರೆಲ್ಲ ಇಂದು ಸಂಸ್ಕೃತಿ ಸಂಶೋಧನೆಯಲ್ಲಿ ಸಾರ್ಥಕ ಸೇವೆ ಸಲ್ಲಿಸುತ್ತಿದ್ದಾರೆ.

ಹಸ್ತಪ್ರತಿ ಸಂಗ್ರಹಕ್ಕೆ ಹೊರಗಡೆ ಕೆಲವು ಜನ ಆಪ್ತ ಸಿಬ್ಬಂದಿ ಸಮೇತ ಶ್ರೀ ದೇವೀರಪ್ಪನವರು ಹೋದಾಗ ಅಲ್ಲಿನ ಅವರ ಕರ್ತವ್ಯ ನಿಷ್ಠೆಯ ಬಗೆಗೆ ಅವರೊಡನೆ ಪ್ರವಾಸ ಮಾಡಿದುದರ ಅನುಭವವನ್ನು ಪ್ರಾಧ್ಯಾಪಕ ಶ್ರೀ ಹ ಕ. ನರಸಿಂಹೇಗೌಡರು ಹೇಳುವುದು ಹೀಗೆ.

"ಅನೇಕ ಗ್ರಾಮಗಳಿಗೆ, ಮಠಮಾನ್ಯಗಳಿಗೆ ನಾನು ದೇವೀರಪ್ಪನವರೊಡನೆ ಹಸ್ತಪ್ರತಿಗಳ ಸಂಗ್ರಹಕಾರ್ಯಕ್ಕೆ ಹೋದಾಗ ಅಲ್ಲಿ ಅವರು ತಮ್ಮ ಸಂಸ್ಥೆಯಲ್ಲಿ ಅನುಸರಿಸುವ ಶಿಸ್ತನ್ನೇ ಅನುಸರಿಸುತ್ತಿದ್ದರು. ಎಂಥ ಸನ್ನಿವೇಶವೇ ಇರಲಿ. ಅನಾನುಕೂಲಗಳೇನೇ ಇರಲಿ, ಅವನ್ನು ಗಣನೆಗೆ ತಕ್ಕೊಳ್ಳದೆ, ಬೆಳಗಿನ 8.30 ರ ವೇಳೆಗೆ ಕೆಲಸಕ್ಕೆ ಸಿದ್ಧರಾಗಿ ಲಭ್ಯವಾದ ಹಸ್ತಪ್ರತಿಗಳನ್ನೆಲ್ಲ ರಾಶಿ ಹಾಕಿಕೊಂಡು ಪ್ರತಿಯೊಂದು ಹಸ್ತಪ್ರತಿಯನ್ನು ಓದುವುದು ಅದರ ಬಗ್ಗೆ ಸೂಕ್ತ ಟಿಪ್ಪಣಿ ಮಾಡಿಕೊಳ್ಳುವುದು ಅನಂತರ ವರ್ಗೀಕರಣ ಮಾಡಿ ಅವುಗಳಿಗೆಲ್ಲ ನಂಬರು ಕೊಟ್ಟು ವ್ಯವಸ್ಥೆ ಮಾಡಿ ಮುಗಿಸುವಾಗ ತಮ್ಮೆಲ್ಲರ ನೆರವನ್ನು ಪೂರ್ಣವಾಗಿ ತೆಗೆದುಕೊಂಡು ಎಂಟು ತಾಸು ಬಿಡುವಿಲ್ಲದೆ ಕಾರ್ಯ ಮಾಡುತ್ತಿದ್ದ ಅವರ ಸಹಿಷ್ಣುತೆಯ ಬಗೆಗೆ ನಾವೆಲ್ಲ ಅವಕ್ಕಾಗಿ ಹೋಗುತ್ತಿದ್ದೆವು. ನಮಗೆಲ್ಲ ಹಸ್ತಪ್ರತಿ ಓದುವುದನ್ನು ಅವು

ಗಳ ಬಗೆಗೆ ಸೂಕ್ತ ಟೀಕೆ ಟಿಪ್ಪಣಿ ತಯಾರಿಸುವುದನ್ನು ಕಲಿಸಿದವರೇ ಶ್ರೀ ದೇವೀರಪ್ಪನವರು. ಹಸ್ತಪ್ರತಿ ಓದಿ ಥಟ್ಟನೆ ಅದರ ಚರಿತ್ರೆಯನ್ನು ಗ್ರಹಿಸುವ ಸಾಮರ್ಥ್ಯ ಅದ್ವಿತೀಯವಾಗಿತ್ತು. ಹಸ್ತಪ್ರತಿಯ ಬರವಣಿಗೆ ಹೇಗೆ ಇರಲಿ. ಅದನ್ನು ಓದುವ ಸಾಮರ್ಥ್ಯದ ಬಗೆಗೆ ನಾವು ಮೂಕ ವಿಸ್ಮಿತರಾಗಿ ಹೋಗುತ್ತಿದ್ದೆವು. ಈ ಕೆಲಸವೆಲ್ಲ ಮುಗಿದ ಮೇಲೆ ಸಾಯಂಕಾಲ ಹೊಸ ಪ್ರದೇಶ ನಿರೀಕ್ಷಣೆಗೆ ತೆರಳಿದಾಗ ದೇವೀರಪ್ಪನವರು ನಮ್ಮೊಡನೇ ಬೆರೆತು ಸ್ನೇಹಮಯವಾಗಿ ವರ್ತಿಸುತ್ತ ಹಾಸ್ಯ ಚಟಾಕಿಗಳನ್ನು ಹಾರಿಸುತ್ತಾ ನಮ್ಮನ್ನು ನಗಿಸಿ ತಾವೂ ನಗುತ್ತಿದ್ದಾಗ ಅವರ ಹೃದಯದ ಯಥಾ ಚಿತ್ರ ವ್ಯಕ್ತವಾಗುತ್ತಿತ್ತು ಇಂಥ ಸಂದರ್ಭದಲ್ಲಿ ನಮಗೆ ಅವರು ಹೇಳುತ್ತಿದ್ದ ಮಾತುಗಳು ಇಂದಿಗೂ ಕಿವಿಯಲ್ಲಿ ಮಾರ್ದನಿಸುತ್ತವೆ. 'ನೀವು ವೃತ್ತಿ ಗೌರವ ಬೆಳಸಿಕೊಳ್ಳಿ, ಅದರಲ್ಲಿ ಶುದ್ಧಿಗಳನ್ನು ಪಡೆಯಬೇಕಾದರೆ ಸತತ ಪ್ರಯತ್ನ ಶೀಲರಾದರೇ ಸಾಧ್ಯ ಇಲ್ಲದಿದ್ದರೆ ನಿಮಗೆ ವೃತ್ತಿಯಲ್ಲಿ ಯಶಸ್ಸುಗಳಿಸಲಾಗುವುದಿಲ್ಲ. ದೇವರ ಪೂಜೆಯನ್ನು ಒಮ್ಮೆ ಮರೆತರೂ ಚಿಂತೆಯಿಲ್ಲ. ಶುದ್ಧಕ್ರಿಯೆಯನ್ನು ಮರೆಯಬಾರದು. ಎಂಬುದೇ ಅವರು ನಮಗೆ ಬೋಧಿಸುತ್ತಿದ್ದ ಬೋಧೆ. ಸಿಬ್ಬಂದಿ ವರ್ಗದವರು ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿಯುತ್ತಿದ್ದ ಈ ಪ್ರಮಾಣಿಕ ಅಧಿಕಾರಿಗಳನ್ನು ನೋಡಿಯೇ ಬಹಳ ಕಲಿಯುತ್ತಿದ್ದರು. ಕ್ರಿಯೆಯ ವಿಷಯದಲ್ಲಿನ ಇವರ ಕಾಠಿಣ್ಯ ಆಗ ಇರುತ್ತಿರಲಿಲ್ಲ.

ಗ್ರಂಥ ಸಂಪಾದನಾ ಕಾರ್ಯದಲ್ಲಿ ಬಹಳ ದೊಡ್ಡ ಹೆಸರು ಮಾಡಿದ ಡಿ. ಎಲ್ ಎನ್. ಅವರು ದೇವೀರಪ್ಪನವರು ಗ್ರಂಥ ಸಂಪಾದನೆಯಲ್ಲಿ ಪಡುತ್ತಿದ್ದ ಪರಿಶ್ರಮದ ಬಗ್ಗೆ ಬಹಳ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದರು. ದೇವೀರಪ್ಪನವರ ಅತ್ಯುತ್ತಮ ಕೃತಿಗಳಲ್ಲೊಂದಾದ 'ಶರಣ ಚರಿತ ಮಾನಸದ, ಮುನ್ನುಡಿ ಬರೆಯುತ್ತ ಡಿ. ಎಲ್ ನರಸಿಂಹಾಚಾರ್ಯರು —"......ಇಂಥ (ಹರಿಹರನಂಥ) ಮಹಾಕವಿಯ ಕೃತಿಗಳನ್ನು ಎಷ್ಟು ಅಭ್ಯಾಸ ಮಾಡಿದರೂ ಸಾಲದು. ಈ ಅಭ್ಯಾಸಕ್ಕೆಲ್ಲ ಆಧಾರವಾಗಿರುವುದು ಆ ಕೃತಿಗಳ ಸವಿಮರ್ಶ ಸಂಪಾದನ ಕಾರ್ಯ. ಶ್ರೀ ದೇವಿರಪ್ಪನವರು ಅವುಗಳ ಸಂಪಾದಿತ ಪಾಠವನ್ನು ಕನ್ನಡಿಗರಿಗೆ ಒದಗಿಸಿಕೊಟ್ಟು ಅವರೆಲ್ಲರ ಕೃತಜ್ಞತೆ ಆದರ ಗೌರವಗಳಿಗೆ ಪಾತ್ರರಾಗಿದ್ದಾರೆ. ಅವರು ಪಟ್ಟಿರುವ ಶ್ರಮವನ್ನು ಆ ಕಾರ್ಯವನ್ನು ಮಾಡಿದವರೇ ಚೆನ್ನಾಗಿ ತಿಳಿಯಬಲ್ಲರು. ಹಸ್ತಪತ್ರಿಯಿಂದ ಲಭ್ಯವಾದ ಅನೇಕ ಪಾಠಾಂತರಗಳಲ್ಲಿ ಕವಿಪಾಠವೇನಿರಬಹುದೆಂದು ಕಂಡುಕೊಂಡು ಅವನ್ನು ತಕ್ಕ ರೀತಿಯಿಂದ ನಿಯೋಜಿಸುವ ಕಾರ್ಯ ಸುಲಭವಾದುದೇನೂ ಅಲ್ಲ. ಶ್ರೀ ದೇವೀರಪ್ಪನವರು ತಮ್ಮ ಸಂಪಾದನ ಕಾರ್ಯವನ್ನು ಪ್ರಾಮಾಣಿಕತೆಯಿಂದಲೂ, ದಕ್ಷತೆಯಿಂದಲೂ ನೆರವೇರಿಸಿ ಪುಣ್ಯಭಾಗಿಗಳಾಗಿದ್ದಾರೆ. ಪೀಠಿಕೆಯಲ್ಲೂ, ಅನುಬಂಧಗಳಲ್ಲೂ ಅದೆಷ್ಟು ಸಹಾಯಕ ಸಾಮಗ್ರಿಗಳನ್ನು

ಒದಗಿಸಿದ್ದಾರೆಂಬುದನ್ನು ನೋಡಿದರೆ, ಅವರ ವಿದ್ವತ್ತುಗಳ ವಿಷಯದಲ್ಲಿ ಯಾರಿಗೆ ತಾನೆ ಮೆಚ್ಚುಗೆಯುಂಟಾಗುವುದಿಲ್ಲ; ಅವರ ಆರ್ದ್ರ ಹೃದಯ ರಸಿಕತೆ ಕವಿ ಶಕ್ತಿಗಳುಕೂಡ ಅವರ ಪೀಠಿಕೆಗೆ ಕಳೆಯನ್ನು ಕೊಟ್ಟಿವೆ. ವಿದ್ವತ್ತಿನ ಫಲ ರಸಾಸ್ವಾದನವಾಗಿರುವುದು ಈ ಪೀಠಿಕೆಯಲ್ಲೂ ವ್ಯಕ್ತವಾಗಿದೆ ... ..."

ಹೀಗೆ ಹೇಳಿ, ಪ್ರಶಸ್ತಿ ಕೊಟ್ಟಮೇಲೆ ಶ್ರೀ ದೇವೀರಪ್ಪನವರ ವಿದ್ವತ್ತು ಶ್ರದ್ಧೆಗಳ ಬಗೆಗೆ ಬೇರೆಯವರ ಪ್ರಶಸ್ತಿಯ ಅವಶ್ಯಕತೆಯೇ ತೋರದು.

ಪ್ರಾಚ್ಯ ಸಂಶೋಧನಾಲಯದಲ್ಲಿ ಶ್ರೀ ದೇವೀರಪ್ಪನವರ ಕಾಲದಲ್ಲಿ ಹೊರ ಬಂದ ಗ್ರಂಥಗಳು ಸಂಖ್ಯಾದೃಷ್ಟಿಯಿಂದಲ್ಲೂ, ಮೌಲಿಕ ದೃಷ್ಟಿಯಿಂದಲೂ ಗಣನೀಯವಾದವುಗಳು. ಸ್ವತಃ ದೇವೀರಪ್ಪನವರು ಸಿಂಗಿರಾಜನ 'ಅಮಲ ಬಸವರಾಜ ಚರಿತ್ರೆ' (ಬಸವರಾಜ ಚರಿತ್ರೆ) ಯನ್ನು ಉತ್ತಮವಾಗಿ ಸಂಪಾದಿಸಿ ಪ್ರಕಟಿಸಿದ್ದಾರೆ (1950). ಏಳು ಸಾವಿರ ಸಾಂಗತ್ಯ ಪದ್ಯಗಳುಳ್ಳ ನಂಜುಂಡಕವಿ ವಿರಚಿತ ಸೋಮನಾಥ ಚರಿತೆಯ ಸಂಪಾದನೆಯ ಕಾರ್ಯದಲ್ಲಿ ದೇವೀರಪ್ಪನವರ ಪರಿಶ್ರಮ ಎಲ್ಲರಿಗೂ ಎದ್ದು ಕಾಣುವಂತಹುದು. ಈ ಗ್ರಂಥ ಮೂರು ಸಂಪುಟಗಳಲ್ಲಿ ಪ್ರಕಟಗೊಂಡಿದೆ.

ಇವರ ಪ್ರಧಾನ ಸಂಪಾದಕತ್ವದಲ್ಲಿ ಲಕ್ಕಣ್ಣ ದಂಡೇಶ ಕೃಪ "ಶಿವ ತತ್ವ ಚಿಂತಾಮಣಿ"(1960). ಕುಮಾರ ವಾಲ್ಮೀಕಿಯ" ತೊರವೆ ರಾಮಾಯಣ (1956) ನಾಗವರ್ಮನ ಕಾವ್ಯವಲೋಕನದ ಮೂರನೆಯ ಪರಿಷ್ಕೃತ ಮುದ್ರಣ. ಕೆಳದಿಯ ಬಸವಭೂಪಾಲ ಕೃತ 'ಶಿವತತ್ವ ರತ್ನಾಕರ' ಪ್ರಥಮ ಸಂಪುಟ(1964), ಕೆಳಲಿ ನಂಜ ರಾಜರಚಿತ ಸಕಲವೈದ್ಯ ಸಂಹಿತಾ ಸಾರರ್ಣವ ಇವೇಮೊದಲಾದ ಅನೇಕ ಮಹತ್ವದ ಕೃತಿಗಳು ಕನ್ನಡ ಸಂಸ್ಕೃತ ಸಾರಸ್ವತ ಪ್ರಪಂಚದ ಮಹತ್ವವನ್ನು ಹೆಚ್ಚಿಸಿವೆ. ಇವರು ತಮ್ಮ ಸಂಸ್ಥೆಯಲ್ಲಿರುವ ಹಸ್ತಪ್ರತಿಗಳ ಕ್ಯಾಟಲಾಗನ್ನು ಮೂರು ಸಂಪುಟಗಳಲ್ಲಿ ಹೊರ ತಂದು ಸಂಶೋಧನ ಕಾರ್ಯ ಕೈಗೊಳ್ಳುವವರಿಗೆ ಅನುಕೂಲ ಒದಗಿಸಿ ಕೊಟ್ಟಿದ್ದಾರೆ, ಸಂಸ್ಥೆಯಲ್ಲಿರುವ ಎಲ್ಲ ಹಸ್ತಪ್ರತಿಗಳನ್ನು ಮೈಕ್ರೋಫಿಲ್ಮ್ ಮೂಲಕ ಶಾಶ್ವತ ಸಾಮಗ್ರಿಗಳನ್ನಾಗಿಸಲು ಶ್ರೀಯುತರು ವಹಿಸಿದ ಶ್ರಮ ಅನನ್ಯಾದೃಶ್ಯವಾದುದು.

ಸೇವಾವಧಿಯ ಕಾಲದಲ್ಲಿ ಮತ್ತು ನಿವೃತ್ತಿಯ ನಂತರ ದೇವೀರಪ್ಪನವರು ಸ್ವತಂತ್ರವಾಗಿ ಹೊರತಂದ ಕೃತಿಗಳ ಸಂಖ್ಯೆ ದೊಡ್ಡದು. ಅವುಗಳಲ್ಲಿ ಶರಣಚರಿತ ಮಾನಸ, ಶಿವಶರಣಸಂಪುಟ, ಸಂಶೋಧನಾತ್ಮಕ ಲೇಖನ ಸಂಗ್ರಹವಾದ 'ಸಂಶೋಧನ ಸಂಪುಟ' ಹಸ್ತ ಪ್ರತಿಗಳ ಇತಿಹಾಸ ಮುಂತಾದವು ಅಂತ್ಯತ

ಮಹತ್ವದ ಕೃತಿಗಳು. ಇವು ದೇವೀರಪ್ಪನವರ ಆಳವಾದ ಅನುಭವ, ಪ್ರಬು
ಅಧ್ಯಯನ ಫಲಗಳನ್ನು ಎತ್ತಿ ತೋರಿಸುವಂತಹವು. ಲಕ್ಷಣದಂಡೇಶ, ಬಸವರಾ
ದೇವರ ರಗಳೆ ಎಂಟುರಗಳೆ, ಐದುರಗಳೆ, ಪೂರ್ವರು ಪುರಾತನರು, ಉಡುತಡಿಯ
ಮಹಾದೇವಿಯಕ್ಕಗಳರಗಳೆಗನ್ನು ಉತ್ತಮ ಪೀಠಿಕೆ, ಅನುಬಂಧಗಳೇ ಮೊದಲಾದ
ವುಗಳನ್ನೊಳಗೊಂಡು ಸಂಪಾದಿಸಿ ಪ್ರಕಟಿಸಿದವುಗಳು ಇತರರೊಡನೆ ಕೂ
ಸಂಪಾದಿಸಿದವುಗಳಲ್ಲಿ ಷಟ್ ಸ್ಥಳವಲ್ಲಭ ( ಚಂಪೂಕೃತಿ) ಮೂರುರಗಳೆಗಳು, ಚನ್ನ
ಮಲ್ಲಿಕಾರ್ಜುನ (ವ್ಯಕ್ತಿ ಚಿತ್ರ) ದೇವರ ದಾಸಿಮಯ್ಯ, ಅಜಿತನಾಥ ಪುರಾ
ಸಂಗ್ರಹ, ಗಿರಿಜಾಕಲ್ಯಾಣ ಸಂಗ್ರಹ ಮೊದಲಾದವುಗಳು ಮುಖ್ಯವಾದವುಗಳು. ತುಂ
ಭದ್ರಾ, ಕಲಾಯೋಗಿ, ಇವೆರಡೂ ಸ್ವತಂತ್ರ ನಾಟಕಗಳು. ಬೆಳುವಲದ ಮಡಿಲಲ್ಲಿ
ಹಳ್ಳಿಯಬದುಕು, ಜೀತವಿಮುಕ್ತಿಗಳು ಕಾದಂಬರಿಗಳು. ಸುವರ್ಣ ಸಂಪುಟವೆಂಬುದ
ಇವರ ಅತ್ಯುತ್ತಮ ಸಣ್ಣ ಕಥೆಗಳನ್ನೊಳಗೊಂಡ ಗ್ರಂಥ ಕೇರಳ ಪಠ್ಯ
ಪುಸ್ತಕ ಸಮಿತಿ, ಅಲ್ಲಿನ ಕನ್ನಡ ಪ್ರದೇಶದಲ್ಲಿನ ಮಕ್ಕಳ ಪಠ್ಯಪುಸ್ತಕಗಳನು
ತಯಾರಿಸಿ ಕೊಡಲು ದೇವೀರಪ್ಪನವರನ್ನೇ ಕೇಳಿಕೊಂಡಿತು ಒಂದರಿಂದ ಹತ್ತನೆಯ
ತರಗತಿಯ ಪಠ್ಯ ಪುಸ್ತಕಗಳನ್ನು ಪೂರುಜನಗಳ ಕಮಿಟಿ ರಚಿಸಿಕೊಂಡು
ತಯಾರಿಸಿ ಕೊಟ್ಟರು.

ಹೀಗೆ ದೇವೀರಪ್ಪನವರು ಸಾಹಿತ್ಯದ ಪ್ರಕಾರಗಳಲ್ಲೂ ಕೆಲಸಮಾಡಿ ಕನ್ನ
ಸಾಹಿತ್ಯ ಸರಸ್ವತಿಗೆ ಗಣನೀಯ ಸೇವೆ ಸಲ್ಲಿಸಿದ ಪ್ರಬುದ್ಧ ಜೀವ ಡಾ॥ ಸಿದ್ಧಯ
ಪುರಾಣಿಕರು ಇವರ ಬಗೆಗೆ "ಹರಿಹರ ಕವಿ ಇರುವರೆಗೂ ದೇವೀರಪ್ಪನವರೂ
ಇರುತ್ತಾರೆ." ಎಂಬ ಬಹು ಅರ್ಥಪೂರ್ಣ ಮಾತನ್ನು ಹೇಳಿದರು. ಹರಿ-
ಹರ ಕಾವ್ಯಗಳು ಇವರ ಅಧ್ಯಯನದ ಪ್ರಧಾನ ವಸ್ತುಗಳಾಗಿದ್ದವು. ಅಂತೆಯೆ
ಹರಿಹರನ ರಗಳೆಗಳ ಸಂಖ್ಯಾದಿ ನಿರ್ಣಯದ ವಿಷಯದಲ್ಲಿ ದೇವೀರಪ್ಪನವ
ಅಭಿಪ್ರಾಯಗಳನ್ನು ಆದಾಯ ಪೂರ್ವಕ ಅಲ್ಲಗಳೆಯುಲಾಗಿಲ್ಲ. ಹರಿಹರನ ಶೈಲಿ
ಇವರ ಮೈಮನಗಳನ್ನು ವ್ಯಾಪಿಸಿ ಬಿಟ್ಟಿತ್ತು ರಗಳೆಗಳಲ್ಲಿ ಹರಿಹರೇತರ ಕೃತಿಗಳನ್ನು
ಥಟ್ಟನೆ ಹಿಡಿದು ಆಧಾರ ಪೂರ್ವಕ ಇದು ಹರಿಹರನದಲ್ಲ ಎಂದು ಹೇಳುವ ಜಾಣ್ಮೆ
ದೀರ್ಘ ಕಾಲದ ಅಧ್ಯಯನ ಸಾಮರ್ಥ್ಯವನ್ನು ಎತ್ತಿ ತೋರಿಸುತಿತ್ತು

ನಿವೃತ್ತಿಯಕಾಲ ಸಮೀಪಿಸಿದಂತೆ ಪ್ರಾಚ್ಯ ಸಂಶೋಧನಾಲಯವನ್ನು ಮೈ
ಸೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸುವ ವಿಚಾರದಲ್ಲಿ ದೇವೀರಪ್ಪನವರು ವಿವಾದದ
ಸುಳಿಗೆ ಸಿಕ್ಕಿ ನೈಷ್ಟುರ್ಯ ಕಟ್ಟಿಕೊಳ್ಳ ಬೇಕಾಯಿತು. ಇದು ಅವರ ಜೀವನದಲ್ಲಿ
ಬಹು ದೊಡ್ಡ ನೋವಿನ ಪ್ರಸಂಗವೇ ಆಯಿತು. ಇವರ ವಾದವಿಷ್ಟೆ: "ಪ್ರಾಚ್ಯ
ಸಂಶೋಧನಾಲಯ" ಹಿಂದೆಯೂ ಸರಕಾರದ್ದು—ಮುಂದೆಯೂ ಈ ಸಂಸ್ಥೆಯನ್ನು

ಸರಕಾರವೇ ತನ್ನ ಹಿಡಿತದಲ್ಲಿಟ್ಟುಕೊಂಡು ಹೆಸರಾಂತ ವಿದ್ವಾಂಸರಿಂದ ಇಲ್ಲಿ ಸಂಶೋಧನ ಕಾರ್ಯವನ್ನು ಮಾಡಿಸಬೇಕೆಂಬುದಾಗಿತ್ತು. ಈ ವಿವಾದದಲ್ಲಿ ಯೂನಿವರ್ಸಿಟಿಯ ಅನೇಕ ಮುಖಂಡರ ವಿರೋಧ ಕಟ್ಟಿಕೊಂಡು ಸ್ವತಃ ತಾವೇ ತಮ್ಮ ಸ್ವಂತ ಹಣ ಖರ್ಚು ಮಾಡಿ ಕೋರ್ಟ್ ಕಟ್ಟೆ ಹತ್ತಿ ರಿಟ್ ಅರ್ಜಿ ಸಲ್ಲಿಸಿ ವಿಫಲರಾದರು. ಕೊನೆಗೆ ನಿವೃತರಾದ ಮೇಲೆ ಮೈಸೂರನ್ನೇ ತಜ್ಯಸಿ ಅಲ್ಲಿನ ಮನೆ ಮಾರಿ ಬೆಂಗಳೂರಿನಲ್ಲಿ ತಮ್ಮ ಕುಟುಂಬದನ್ನೆತ್ತಿಗೊಂಡು ಸೂರು ಮಾಡಿಕೊಂಡು ಇಷ್ಟಷ್ಟುಕಾಲ ನೆಮ್ಮದಿಯಿಂದ ಇದ್ದು 3-1-1988 ರಂದು ಈ ಪ್ರಬುದ್ಧ ಜೀವ ಕೊನೆಯುಸಿರೆಳೆಯಿತು. ಮರಣಕ್ಕೆ ಏಳೆಂಟು ದಿನಗಳ ಮುನ್ನ ನನ್ನೊಡನೆ ನನಗೆ ಮರಣ ಈಗಲೇ ಸಂಭವಿಸುವುದಿಲ್ಲವೆಂದೂ, ಬೇಗನೆ ಬಸವಣ್ಣನವರ ವಚನಗಳ ಸಂಸ್ಕರಣ ಕಾರ್ಯವನ್ನು ಮುಗಿಸಿಯೇ ಸಾಯುತ್ತೇನೆಂದು ಬಹು ಆತ್ಮ ವಿಶ್ವಾಸದಿಂದ ಹೇಳಿದರು. ಆದರೆ ಶಿವನಿಚ್ಛೆ ಬೇರೆ ಆಗಿತ್ತು. ದೇವಿರಪ್ಪನವರು ಆರ್ಥಿಕವಾಗಿ ಗಣನೀಯರಾಗಿರದಿದ್ದರೂ ಬಡತನವನ್ನೇನೂ ಅನುಭವಿಸಿದವರಲ್ಲ ಕೊನೆಯ ಗಳಿಗೆಯವರೆಗೂ ಲೆಕ್ಕಣಿಕೆಗೆ ವಿರಾಮ ಕೊಡದೆ ದುಡಿದು ಸಂಪಾದಿಸಿದರು ಹರಿಹರ ಮಹಾಕವಿಯ ಕೆಚ್ಚುನೆಚ್ಚುಗಳು ಇವರ ಮೈ ಮನಗಳನ್ನು ತುಂಬಿಕೊಂಡಿದ್ದರಿಂದಲೋ ಏನೋ " ಮತಿಗೆಟ್ಟು ಅನ್ಯರ ಹೊಗಳದಂತೆ, ಧೃತಿಗೆಟ್ಟು ಅನ್ಯರ ಬೇಡದಂತೆ " ಮನವನ್ನಿರಿಸಿಕೊಂಡು ಸಾರ್ಥಕ ಬಾಳನ್ನು ಬಾಳಿದ ಈ ಧೀಮಂತ ವ್ಯಕ್ತಿಯನ್ನು ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷ ಸ್ಥಾನವಾಗಲಿ, ವಿಶ್ವವಿದ್ಯಾಲಯಗಳ ಡಾಕ್ಟರೇಟ್ ಪ್ರಶಸ್ತಿಯಾಗಲಿ ಮುಖ ತಿರುಗಿಸಿ ನೋಡದೆ ಇದ್ದುದು ಕಾಲ ಮಹಿಮೆಯೋ ಏನೋ ?

ಕೊನೆಯವರೆಗೂ ಬಾಳಿನಲ್ಲಿ ಕಾಯಕ ಸದ್ಭಾವದಿಂದಾದ ದುಡಿದು ಸಂಪಾದಿಸಿ ತೃಪ್ತ ಜೀವನ ನಡೆಸಿದರು. ಇದ್ದ ಒಬ್ಬನೇ ಮಗ ಇಂಜನಿಯರಾಗಿ ತನ್ನ ಜೀವನ ಮಾರ್ಗವನ್ನು ರೂಪಿಸಿಕೊಂಡನು ಹೆಣ್ಣು ಮಕ್ಕಳು ಮೂವರು ವಿದ್ಯಾವಂತರು. ಸ್ವತಃ ಸಂಪಾದಿಸುವ ಶಕ್ತಿಯನ್ನು ಅವರೂ ಪಡೆದರು. ಮೊದಲ ಮಗಳನ್ನು ಶ್ರೀ. ಪಿ ಬಸಪ್ಪ ಎಮ್. ವಿ. ಎಸ್ಸಿ. ಪದವೀದಧರರಿಗೆ ಕೊಟ್ಟು ಲಗ್ನ ಮಾಡಿದ್ದಾರೆ. ಎರಡನೆಯ ಮಗಳನ್ನು ಬೆಂಗಳೂರು ಕೃಷಿ ವಿದ್ಯಾಲಯದಲ್ಲಿ ಹಣಕಾಸು ನಿಯಂತ್ರಣಾಧಿಕಾರಿಗಳಾಗಿರುವ ಶ್ರೀ ನಾಗಭೂಷಣ್ ಅವರಿಗೆ ಕೊಟ್ಟು ಲಗ್ನ ಮಾಡಿದ್ದಾರೆ ಮೂರನೆಯ ಮಗಳೂ ಸ್ನಾತಕೋತ್ತರ ಪದವೀಧರೆಯಾಗಿ ಉಪನ್ಯಾಸಕಿಯಾಗಿ ಸ್ವತಃ ದುಡಿದು ಜೀವಿಸುತ್ತಿದ್ದಾರೆ. ಹೀಗಿದ್ದು ಅವರಿಗೆ ಯಾವ ವಿಧವಾದ ಸಾಂಸಾರಿಕ ಕಿರಿಕಿರಿಯೇನೂ ಅಂಥ ಗಣನೀಯವಾದದ್ದಾಗಿರಲಿಲ್ಲ,

ಕನ್ನಡ ಸಾಹಿತ್ಯ-ಸಂಶೋಧನೆ ಮತ್ತು ಸಂಸ್ಕೃತಿ ಕ್ಷೇತ್ರ ಓರ್ವ ನಿಷ್ಠಾವಂತನಾದ ವಿದ್ವಾಂಸನಾದ ಸಹೃದಯನಾದ ಶ್ರದ್ಧಾವಂತ ವ್ಯಕ್ತಿಯಿಂದ ಬಡವಾಗಿ ಕಾಣುವುದಂತೂ ಸತ್ಯ.

ಮೇ, 1988

# ಶ್ರೀ ಉದ್ದಾನೇಶ್ವರ ಶಿವಯೋಗೀಂದ್ರ.

ಶ್ರೀ ಬಿ. ವೀರಭದ್ರಯ್ಯ, ಪ್ರಾಧ್ಯಾಪಕರು
ಸಿದ್ಧಗಂಗಾ ಕಾಲೇಜು ತುಮಕೂರು-2

ಅಣ್ಣ ಬಸವನ ಪರುಷ ಶಕ್ತಿಯವತಾರವೋ
ಹಣ್ಣಾದ ಶಿವತತ್ತ್ವದನು ಭೂತಿ ಸಾರವೋ
ನೈವೇತ್ರ ಪುಣ್ಯಭೂಮಿ ಸಿದ್ಧಗಂಗೆಯ ಸಾರಿ
ನಟ್ಟಡವಿ ಗಿರಿಗುಹೆಯ ಮೆಚ್ಚಿ ತಾಪಸನಾಗಿ
ಪಟ್ಟಣಿಗರನ್ನೆ ನಿಸ್ವಾರ್ಥಸೇವೆಯಿಂದೆಳೆದು
ದಿಟ್ಟ ನಿವ ಹಸಿದವರ ಹೊಟ್ಟೆಗನ್ನವ ಕೊಟ್ಟು
ಕಟ್ಟದನು ಶ್ರೀ ಮಠವ ನಿಷ್ಠೆಯಿಂದೊಲಿದು
ಜಠರಕ್ಕೆ ಜೋಳಿಗೆಯ ಹಿಡಿದ ಜೋಗಿಗಳುಂಟು
ಜನಹಿತಕೆ ಜೋಳಿಗೆಯ ಹಿಡಿದ ಜನರೆಷ್ಟುಂಟು ?
ಕಾಮವನು ಗೆಲ್ಲದೆಯ ಕಾವಿಯುಟ್ಟವರುಂಟು
ಕಾಮವನು ಸುಟ್ಟ ನಿಷ್ಕಾಮಿಗಳು ಎಷ್ಟುಂಟು ?
ತೆಂಗು ನೋಡಲು ಗಡಸು ಒಳಗಿರುವುದೆಳನೀರು
ಕೆಂಗಣ್ಣ ಯತಿವರನ ನಸುಕೋಪ ಕರುಣಾ ದೃಷ್ಟಿ
ವಿಶ್ವದಾದರ್ಶ ಖನಿಯಾದವಗೆ ಶರಣೆಂಬೆ.

---

ಅಂಗನಾ, ತನ್ನ ತಾನರಿದು, ತನ್ನ ಅಜ್ಞಾನ
ಆಶಾಪಾಶ ಅನಾಚರ ಅಸತ್ಯಾ ನಡೆ ನುಡಿಗಳ ತಾನರಿದು,
ತನ್ನ ದುರ್ಗುಣಗಳ ನೀಗಿ ನಿಜದಲ್ಲಿ ನಿಂದಡೆ
ತಾನೇ ಮಾಯಾತೀತ. ತಾನೇ ಗುಣಾ ತೀತ,
ತಾನೆ ಸಗುಣ ನಿರ್ಗುಣಕ್ಕಾಧಾರ ಮೂರ್ತಿ,
ತಾನೆ ಸಾಕಾರ ನಿರಾಕಾರಕ್ಕೆ ಚೈತನ್ಯಮೂರ್ತಿ.
ನಿಜವಸ್ತು ನೋಡ ಅಪ್ರಮಾಣ-ಕೂಡಲ ಸಂಗಮದೇವಾ.

- ಬಸವಣ್ಣನವರು

# ಮಾನ್ಯ ಖೇಟ

**ವಿ. ಎಸ್. ಕಾಂತರವರು,** ಅಧ್ಯಾಪಕ, ಟಾಗೋರ ಸ್ಮಾರ
ಪ್ರೌಢ ವಿದ್ಯಾಲಯ, ರಾಯಚೂರು.

ಕನ್ನಡಮ್ಮನ ಕಮಲಮುಖ ಕಲಬುರ್ಗಿಯ ಪ್ರದೇಶವಾದರೆ ಮುತ್ತಿನ ಮೂಗ
ಮಾನ್ಯ ಖೇಟ. ಚಿನ್ನ ಅಮೋಘ ವರ್ಷ ಮುತ್ತು ಶ್ರೀ ವಿಜಯ ಅದರ ಕಾಂತಿ ಕ
ರಾಜಮಾರ್ಗ. ಕವಿರಾಜರ ಮಾರ್ಗ-ಅಥವಾ ಕವಿಗಳ ರಾಜ ಮಾರ್ಗ ಭಾರತದ ಸಮು
ತೀರ್ಥಗಳ ಸಾರ ಸರ್ವಸ್ವವಾದ ಅಗಸ್ತ್ಯಮುನಿ ಪುಂಗವರ ಕಮಂಡಲದಿಂದ ಉದು
ತವಾದ ಇಂದ್ರದೇವನ ಕೃಪೆಯಿಂದ ಪ್ರವಹಿಸುತ್ತಿರುವ ಕಾಗಿಣೀ ನದಿಯ ತ
ಮಾನ್ಯಖೇಟ ನಗರ- ಅದುವೇ ಇಂದಿನ ಮಳಖೇಡ. ಪರ್ಜನ್ಯಪುರ ವೆಂಬ ಹೆ
ಸಿಂದ ಪ್ರಸಿದ್ಧಿ ಪಡೆದ ಪುಣ್ಯ ಸ್ಥಾನ. ಹನ್ನೆರೆಡು ಶತಕಗಳ ಭವ್ಯ ಇತಿಹಾಸವು
ದಿವ್ಯ ನಗರ.

ಕನ್ನಡನಾಡಿನ ಕೀರ್ತಿ ಕಳಶ ರಾಷ್ಟ್ರಕೂಟ ಮಹಾ ಸಾಮ್ರಾಜ್ಯದ ರಾಜಧಾ
ಈ ನಗರ ನಾಸಿಕ ಪ್ರದೇಶದಲ್ಲಿದ್ದ ಮಯೂರ ಖಂಡಿಯು ಮೊದಲು ರಾಜಧಾನಿಯ
ಗಿತ್ತು. ರಾಜ್ಯವು ಸಾಮ್ರಾಜ್ಯವಾದಾಗ ಅದರ ಕೇಂದ್ರ ಸ್ಥಾನದ ವೈಭವವನ
ಪಡೆಯಿತು ಈ ಪಟ್ಟಣ. ಆದರೆ ಇಂದು ಅಳಿದುಳಿದ ಸ್ಥಾನ ಮರೆತರೂ ಮರೆಯಲಾಗ
ತಾಣ. ಎರಡು ಶತಮಾನಗಳಿಗಿಂತಲೂ ಹೆಚ್ಚುಕಾಲ ವೈಭವದಿಂದ ಆಳಿದ ರಾ
ವಂಶ ರಾಷ್ಟ್ರಕೂಟ ವಂಶ. ಕರ್ನಾಟಕದ ಕಡುಗಲಿಗಳಾದ ಅವರ ಅಂಕಿತದ
ಮಹಾರಾಷ್ಟ್ರವೂ ಕೂಡ ಇದ್ದಿತು. ರಾಷ್ಟ್ರವೆಂದರೆ ನಾಡಗೌಡ ಅವರು ಅಚ್ಚ
ಕನ್ನಡಿಗರೆನ್ನುವುದು ನಿಚ್ಚಳವಾದ ಮಾತು.

ಬಾದಾಮಿಯ ಚಾಲುಕ್ಯರನ್ನು ಸೋಲಿಸಿದ ದಂತಿವರ್ಮನು ಮಹಾತೇಜ
ಯಾದ ಮಹಾರಾಜ. ರಾಜ ಪರಮೇಶ್ವರ ಖಡ್ಗಾವಲೋಕ--ಪೃಥ್ವೀವಲ್ಲಭ ಇ
ಇವನ ಅಗ್ಗಳಿಕೆಗಳು. ಇವನು ತನ್ನ ರಾಜ್ಯವನ್ನು ಮಾಳವದ ವರೆಗೂ ವಿಸ್ತರಿಸಿದನ
ಇವನ ನಂತರ ಸಿಂಹಾಸನಾರೂಢನಾದವನು ಒಂದನೆಯ ಕೃಷ್ಣ. ಇವನು ದಕ್ಷಿಣದ
ಗಂಗವಾಡಿಯನ್ನು ಭೇದಿಸಿದ ಮಹಾಶೂರ. ಇವನು ಕಲೋಪಾಸಕ---ಎಲ್ಲೋರ
ಅಖಂಡ ಶಿಲೆಯಲ್ಲಿ ನಿರ್ಮಿಸಿದ ಶಿವಾ ದೇವಾಲಯ ಇಂದಿಗೂ ಈ ರಾಜನ ನೆನ
ಕೊಡುತ್ತದೆ ಇದಕ್ಕಿದ್ದ ಐತಿಹಾಸಿಕ ಮಹತ್ವ ಅಷ್ಟಿಷ್ಟಲ್ಲ. ಪಾಶ್ಚಿಮಾ
ಇತಿಹಾಸಕಾರನಾದ ಸ್ಮಿಥ್ ಅವರಹೇಳಿಕೆ ಯಂತೆ—“ ಯಾವುದೇ ರಾಷ್ಟ್ರ
ಅಭಿಮಾನ ಪಡುಬಹುದಾದಂತಹ ಈ ಕೈಲಾಸ ದೇವಾಲಯವು ಜಗತ್ತಿನ ಆಶ್ಚರ್ಯ

ಗಳಲ್ಲಿ ಒಂದು(According to smith:' The Kailasa temple is one of the wonders of the world a work of which any nation may be proud " L. Mookarjee)

ರಾಜ್ಯವನ್ನು ಸಾಮ್ರಾಜ್ಯವಾಗಿ ಪರಿವರ್ತಿಸಿದ ಸಾರ್ವಭೌಮ ಧ್ರುವ. ನಿರುಪಮ, ಧಾರಾವರ್ಷ, ಕಲಿವಲ್ಲಭ ಇವು ಇವನಿಗಿದ್ದ ಸಾರ್ಥಕ ಬಿರುದುಗಳು. ಇವನು ದಕ್ಷಿಣದಲ್ಲಿ ವೆಂಗಿಯ ಚಾಲುಕ್ಯರನ್ನೂ ಹಾಗೂ ಪಲ್ಲವರನ್ನೂ' ಉತ್ತರದಲ್ಲಿ ಗುರ್ಜರಾತಿನ ವತ್ಸರಾಜನನ್ನೂ ಮತ್ತು ಗೌಡದೇಶದ ಧರ್ಮಪಾಲನನ್ನೂ ಸೋಲಿಸಿದನು. ಕಿರಿಯಮಗನಾದರೂ ಸಮರ್ಥನಾದ ಗೋವಿಂದನನ್ನು ಉತ್ತರಾಧಿಕಾರಿಯಾಗಿ ಘೋಷಿಸಿದನು. ಧ್ರುವನು ಕೀರ್ತಿಶೇಷ ನಾದುದೇತಡ ಹಿರಿಯಮಗನಾದ ಕಂಭನು ಆರ್ಭಟಿಸಹತ್ತಿದನು. ಶಕ್ತಿಯ ಸಾಕಾರರೂಪನಾದ ಗೋವಿಂದನು ಅದಕ್ಕೆ ಬೆದರಲಿಲ್ಲ. ಇವನ ಹೊಡೆತಕ್ಕೆ ಅಣ್ಣನ ಬಣ್ಣ ಬಯಲಾಯಿತು. ಕಂಭನು ಶರಣು ಬರಬೇಕಾಯಿತು. ಗೋವಿಂದ ದೊರೆ ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ. ಕರುಣಾರ್ದ್ರ ಹೃದಯಿ ಅಣ್ಣನೆಂಬ ಗೌರವಕ್ಕೆ ತಕ್ಕಂತೆ ಮರ್ಯಾದ ಮಾಡಿ ಕಂಭನನ್ನು ಗಂಗವಾಡಿಯ ಪ್ರತಿನಿಧಿಯನ್ನಾಗಿ ನಿಯಮಿಸಿದನು. ತಮ್ಮಂದಿರಾದ ಇಂದ್ರ, ಕರ್ಕ ಇವರನ್ನು ಗುಜರಾತಿನಲ್ಲಿ ನೆಲಸುವಂತೆ ಮಾಡಿದನು. ಹಿಮವತ್ಪರ್ವತದ ವರೆಗೂ ದಂಡೆಯಾತ್ರೆ ಮಾಡಿ ಸಾರ್ವಭೌಮ ನಾಮಾಂಕಿತಕ್ಕೆ ಯೋಗ್ಯನಾದನು. ಮತ್ತೆ ತಲೆ ಎತ್ತಿದ್ದ ಗುರ್ಜರ ರಾಜನನ್ನು ಕನೌಜದ ಚಕ್ರಾಯುಧನನ್ನೂ ವಂಗದೇಶದ ಧರ್ಮಪಾಲನನ್ನೂ ಅಂಕೆಯಲ್ಲಿಟ್ಟು ಕೊಂಡನು. ಪುನಃ ದಕ್ಷಿಣಕ್ಕೆ ದಂಡೆಯಾತ್ರೆ ಹೊರಟು ಕೇರಳದ ರಾಜರನ್ನೂ ಚೋಳ ಪಲ್ಲವ ಪಾಂಡ್ಯರನ್ನೂ ಸೋಲಿಸಿದನು. ಸಿಂಹಳದ ದೊರೆಯನ್ನೂ ಪರಾವಭವ ಗೊಳಿಸಿದ ಇವನು ದಾಶರಥಿಯು ಅಪರಾವತಾರನೆಂದರೆ ತಪ್ಪಾಗದು.

ಅಖಂಡ ಭಾರತದಲ್ಲಿ ಸಾರ್ವ ಭೌಮತ್ವವನ್ನು ಮೆರೆಸಿದ ಇವನು ನಿಜಕ್ಕೂ ಜಗತ್ತುಂಗ ಕೀರ್ತಿನಾರಾಯಣ. ಇತಿಹಾಸಕಾರರು ಇವನನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಈ ಗೋವಿಂದ ಭೂಪತಿಯನ್ನು ನಂತರದ ಪೇಶ್ವಯವರಂತೆ ಹಿಮಾಲಯದಿಂದ ಕನ್ಯಾಕುಮಾರಿ ಪರ್ಯಂತ ಪರರಾಯರ ಕ್ಷೇತ್ರದಲ್ಲಿ ಕಾಲಿಡದೆ ತನ್ನ ರಾಜಾಶ್ವವನ್ನು ಓಡಿಸಬಲ್ಲಂತಹ ಸಾಮ್ರಾಜ್ಯ ವಿಸ್ತಾರಕನೆಂದು ಉದ್ಗರಿಸಬಹುದು. (" Well might be exclaims like the later Peshavas that his horse could run from the Himalays to the cape camorin without treading upon others territory"... R C. Mujumdar ) ಭಾರತದಲ್ಲಿ ಬಂದು ತಮ್ಮ ಶಕ್ತಿಯುಕ್ತಿಗಳಿಂದ ನೆಲೆನಿಂದ

ಪರದೇಶದವರು ಕೂಡ ಈ ಸಾರ್ವಭೌಮನ ಗುಣಗಾನ ಮಾಡಿದ್ದಾರೆ. ಅರಬ ದೇಶದ ವ್ಯಾಪಾರಿ ಸುಲೇಮಾನನು ಈ ದೊರೆಯನ್ನು ಚೀನ ಹಾಗೂ ರೋಮ ಸಾಮ್ರಾಜ್ಯಗಳ ಸಾರ್ವಭೌಮರಂತೆ, ಬಗದಾದ ಖಲೀಫನಂತ ಭಾರತದ ಮಹಾ ಸಾಮ್ರಾಟನೆಂದು ಕರೆದಿದ್ದಾನೆ. (" The Arab merchant Sulaiman called him as a great king of India as were the emperor of of Rome, China and Caliph of Bagadad". Three authors)

ಇತಿಹಾಸ ಪ್ರಸಿದ್ಧನಾದ ಮೂರನೆಯ ಗೋವಿಂದನ ಏಕಪಾತ್ರ ಸುಪುತ್ರನೇ ಅಮೋಘ ವರ್ಷ ನೃಪತುಂಗ. ಇವನ ಹುಟ್ಟು ಹೆಸರು ಶರ್ವ. ಕನ್ನಡದ ಕಡುಗಲಿ. ಯೋಗ್ಯತೆಯಲ್ಲಿ-ಪ್ರಥ್ವೀವಲ್ಲಭ, ಕೀರ್ತಿಯಲ್ಲಿ ಅತಿಶಯ ಧವಳ. ಶಿಷ್ಟರಿಗೆ ನೀತಿನಿರಂತರ ದುಷ್ಟರಿಗೆ ನಿತ್ಯಮಲ್ಲ ವಲ್ಲಭ. ಸೌಭಾಗ್ಯದಲ್ಲಿ ಲೋಕ ಚಂದ್ರ. ಕಾರ್ಯದಲ್ಲಿ ವೀರನಾರಾಯಣ. ಮಾನ್ಯ ಖೇಟದ ಮಹಾ ದೊರೆಯಾಗಿ ತನ್ನ ೧೫-೧೬ ನೆಯ ಚಿಕ್ಕವಯಸ್ಸಿನಲ್ಲಿಯೇ ಸಿಂಹಾಸನಾ ರೂಢನಾದನು. ಇವನ ತಂದೆ ಗೋವಿಂದನು ಉತ್ತರ ದಿಗ್ವಿಜಯದಿಂದ ಮರಳುತ್ತಿರುವಾಗ ಮಾರ್ಗ ಮಧ್ಯದಲ್ಲಿ ನರ್ಮದಾ ನದಿಯ ತೀರದಲ್ಲಿ ಶ್ರೀ ಭುವನ ವೆಂಬ ಸ್ಥಾನದಲ್ಲಿ--ನೃಪತುಂಗನ ಜನನವಾಯಿತು. ಮಹಾವೀರನಾದ ಗೋವಿಂದನು ದಿಗ್ವಿಜಯಾರ್ಥ ಹೋದಾಗಲೂ ಮಹಾರಾಣಿ ಜೊತೆಗೆ ಇದ್ದಳೆನ್ನುವುದು ಸತಿಪತಿಯರ ನಿರ್ಭೀಕತೆ. ಕ್ಷಾತ್ರ ತೇಜಗಳಿಗೊಂದು ನಿದರ್ಶನ. ಅದೇ ಕ್ಷಾತ್ರ ತೇಜದಿಂದ ಅರವತ್ತೈದು ವರ್ಷಕಾಲ ಸುದೀರ್ಘವಾಗಿ ವೈಭವವನ್ನು ಮೆರೆದನು.

ಇಂತಹ ಶಕ್ತಿ ಶಾಲಿ ಸಾಮ್ರಾಟನಿಗೂ ಶತ್ರುಗಳ ಕಾಟತಪ್ಪಿರಲಿಲ್ಲ. ಒಳಹೊರಗಿನ ಅರಾತಿಗಳನ್ನು ನಿಗ್ರಹಿಸ ಬೇಕಾದರೆ ಇಪ್ಪತ್ತು ವರ್ಷಕಾಲ ಹಿಡಿಯಿತು. ರಾಜಕಾರಣ ಪಟ್ಟುವಾಗಿದ್ದ ನೃಪತುಂಗನು ಸಾಮದಾನ ಭೇದದಂಡ ಮುಂತಾದ ಚತುರೋಪಾಯಗಳಿಂದ ಅರಿರಾಜರನ್ನು ಅಂಕೆಯಲ್ಲಿಟ್ಟು ಕೊಂಡನು ಗಂಗರನ್ನೂ ಪಲ್ಲವರನ್ನೂ ಆತ್ಮೀಯರನ್ನಾಗಿ ಮಾಡಿಕೊಳ್ಳದೆ ತನ್ನ ಸಾಮ್ರಾಜ್ಯಕ್ಕೆ ಸ್ಥಿರತೆ ಇಲ್ಲವೆಂದು ಅರಿತ ಅವನು ಗಂಗರಾಜ ಕುಮಾರನಾದ ಬೂತುಗನಿಗೆ ತನ್ನ ಹಿರಿಯ ಮಗಳಾದ ಚಂದ್ರೋಬಲಬ್ಬೆಯನ್ನು. ಪಲ್ಲವ ರಾಜ ಕುಮಾರನಿಗೆ ಕಿರಿಯಳಾದ ಶಂಖಾದೇವಿಯನ್ನು ಧಾರೆ ಎರೆದು ಕೊಟ್ಟು ಅವರ ಅಪಾರ ಸ್ನೇಹವನ್ನು ಗಳಿಸಿಕೊಂಡನು. ಮಗನಾದ ಕೃಷ್ಣನು ಚೇದಿರಾಜ ಕುಮಾರಿಯ ರೂಪ ಯೌವನಗಳಿಗೆ ಮರಳಾಗಿ ತಂದೆಯೆದುರು ಖಡ್ಗವನ್ನೆತ್ತಿದಾಗ ವೀರ ಬಂಕೇಯನನ್ನು ಕಳಿಸಿ ಹಿಡಿಸಿ ತರಿಸಿದನು. ಕರ್ತವ್ಯ ನಿಷ್ಠುರ ನಾದ ಇವನು ಮರಣ ದಂಡನೆಯನ್ನೇ

ಸಲನುವಾದನು. ವೀರ ಬಂಕೇಯ ನನೋಳಗೊಂಡು ರಾಜ್ಯದ ಆಧಾರ ಸ್ತಂಭ
ರೂ ಕ್ಷಮಾದಾನವನ್ನು ಇಚ್ಛಿಸಿದ್ದರು. ತನ್ನ ಮನಸ್ಸಿನ ವಿರುದ್ಧವಾಗಿ
ಾದರೂ ಪ್ರಜರ ಇಚ್ಛೆಯನ್ನು ನೆರವೇರಿಸಲು ಕ್ಷಮಾದಾನ ಮಾಡಿದನು ಪ್ರಜಾ
ಭುತ್ವಕ್ಕೊಂದು ದಿವ್ಯ ನಿದರ್ಶನವಲ್ಲವೆ ಈ ಘಟನೆ? ನಿರಪರಾಧಿಯಾದ ಸೊಸೆ
ನ್ನು ಸ್ವಾಗತಿಸಿ ಪ್ರೇಮಿಗಳ ಹೃದಯಕ್ಕೆ ಚಂದನ ಲೇಪ ಮಾಡಿದನು. ಇವನ
ರ್ತವ್ಯನಿಷ್ಠ್ಮರತಗೆ ಬಂದ ನಿದರ್ಶನ-ಉಗ್ರರೂಪದಲ್ಲಿ ಹಬ್ಬಿದ ಸಾಂಕ್ರಾಮಿಕ ರೋಗದ
ಾರಣೋಪಾಯ ವೆಂದು ತನ್ನ ಬೆರಳನ್ನೇ ಕತ್ತರಿಸಿ ದೇವಿಗೆ ಬಲಿಕೊಟ್ಟನು.
ು ತ್ವರಿತ ಪರಿಹಾರವನ್ನು ನೀಡಬಲ್ಲ ಉಪಾಯವೆಂದು ನಂಬಿದ್ದನು ಪ್ರಜಾ
ತ್ಸಲ್ಯ ಹಾಗು ರಾಜಧರ್ಮ ಪರಿಪಾಲನೆಗೆ ನಿದರ್ಶನವಿದು. ಇತಿಹಾಸಕಾರರು
ಘಟನಗೆ ಬಹು ದೊಡ್ಡ ಪ್ರಾಮುಖ್ಯತೆ ಇತ್ತಿದ್ದಾರೆ.

mogha Varsha ............ His ideal of royal duties
s such that on the out break of a severe epidemic
actually cut off his own finger and offered it
a goddess in the belief that it would be an
ective remedy" L. Mockarjee.

ವೀರ ಬಂಕೇಯ ಹಾಗೂ ಧೀರನಾದ ಕರ್ಕ ಇವರು ಮಹಾರಾಜನ ಬಲಗೈ
ಂತಿದ್ದರು. ಜೀವದ ಗೆಳೆಯರಾದ ಇವರೇ ಂಗ ಮಗಧ ರಾಜರನ್ನು ಸೋಲಿಸಿ
ರ್ವಭೌಮತ್ವಕ್ಕೆ ಕಳೆ ಕಟ್ಟುವಂತೆ ಮಾಡಿದರು ಕೈರುವ್ಯೋತ್ತರ ದೇವನಾದ
ತುಂಗನ ಪತ್ನಿಯ ಹೆಸರು ಲಕ್ಷ್ಮೀದೇವಿ. ಇವನ ವಂಶಜರು ಪರಮ ವೈದಿಕ
ಹರರಲ್ಲಿ ಭೇದವೆಣಿಸದ ಭಗವದ್ಭಕ್ತರು. ಲಕ್ಷ್ಮೀದೇವಿಯ ಅನನ್ಯ ಉಪಾಸಕರು.
ಹಾಗು ಶಿವ ಸಂಬಂಧವಾದ ಲಾಂಛನಗಳನ್ನು ಒಂದೆಡೆ ಕಂಡರೆ ಇನ್ನೊಂದೆಡೆ
ಡ ಲಾಂಛನವನು ಕಾಣಬಹುದು. ಇವನು ನಿರ್ಮಿಸಿದ ರಾಜಮಾರ್ಗಗಳು
ವನಗಳು ಅಗ್ರಹಾರ ಹಾಗೂ ದೇವಾಲಯಗಳು ಕಂಡವರ ಕಣ್ಮನಗಳನ್ನು
ುತ್ತಿದ್ದವು. ಭಾಗ್ಯ ನಗರವಾದ ಮಾನ್ಯ ಖೇಟ ಅಮರಾವತಿಯಂತಿತ್ತು.
ನು ಮಹಾ ವೈದಿಕನಾಗಿದ್ದರೂ ಇವನ ಪರಧರ್ಮ ಸಹಿಷ್ಣುತೆ ಅಗಾಧವಾಗಿತ್ತು
ಕ್ಕೆ ಪ್ರಚಲಿತವಿದ್ದ ಜೈನ ಬೌದ್ಧ ಮುಂತಾದ ಯಾವುದೇ ಮತ ಇವನಿಂದ
ಯ ಪಡೆಯದಿರಲಿಲ್ಲ. ಜಿನಾಲಯಗಳಿಗೆ ದತ್ತಿ ವೈದಿಕ ಬ್ರಾಹ್ಮಣರಿಗೆ ಗ್ರಾಮ
ಮುಂತಾದ ಉಲ್ಲೇಖಗಳಿವೆ.

ವಿದ್ಯಾ ಬೃಹಸ್ಪತಿಯಾದ ಇವನ ಒಡ್ಡೋಲಗ ಪೆಳನುಡಿವೆಂಡಿರ ಜ
ಪೆಸೆಗೆ ಬೆಳ್ದಿಗಟ್ಟಿ ಬ್ರಹ್ಮ ಋಷಿಗಳ್ಗೆ ತತ್ವಮಂ ಬೋಧಿಸ ಜಾಣ್ಮೆಯಂ ನೆ
ಪೆತ್ತ ಜನಕ ಭೂಪಾಲನ ಸಭೆಯಂತಿತ್ತು. ಇವನ ಆಶ್ರಯದಲ್ಲಿಯೇ ಶಾಕ
ಯನನೆಂಬ ವೈಯಾಕರಣಿಯು "ಅಮೋಘ ವೃತ್ತಿ" ಎಂಬ ಹೆಸರಿನಿಂದ ಸಂ
ವ್ಯಾಕರಣ ಗ್ರಂಥವನ್ನು ಬರೆದನು. ದಂಡಿ ಭಾಮಹ ಮುಂತಾದ ದಿಗ್ಗಜ ಪಂ
ಕಾವ್ಯ ಮಾರ್ಗಗಳ ಮೇಲೆ ಚರ್ಚೆ ನಡೆಯುತ್ತಿತ್ತು. ಇವನ ಅಭಿಪ್ರಾ
ನಿರ್ಣಾಯಕವಾಗಿತ್ತು. ಸಂಸ್ಕೃತದ ವ್ಯಾಮೋಹ ಪ್ರಾಕೃತದ ಪ್ರೀತಿಗಳು ಕ
ವನ್ನು ಕಡೆಗಣಿಸಲಿಲ್ಲ ಕನ್ನಡ ಸೇವೆಗೆ ಬದ್ಧ ಕಂಕಣನಾಗಿದ್ದ ಇ
'ಕವಿರಾಜ ಮಾರ್ಗ' ವೆಂಬ ಮೇರು ಕೃತಿಗೆ ಕಾರಣನಾಗಿದ್ದಾನೆ.
ಮಂಡನೆಯಿಂದದಾಗಿ "ನೃಪತುಂಗ ದೇವ ಮಾರ್ಗಾಂತರ" ವೊಂದು
ಗೊಂಡಿತ್ತೆಂದು ಕವಿರಾಜ ಮಾರ್ಗದಲ್ಲಿ ನಿಚ್ಚಳವಾಗಿ ಕಾಣುತ್ತದೆ.

ಮಾನ್ಯ ಖೇಟದ ಮಣ್ಣಿನ ಮಹಿಮೆಗೆ ಆಕರ್ಷಿತನಾಗಿ ಬಂದ ಶ್ರೀ ವಿ
ಅಥವಾ ಜಯ್ಯಾಳನು ಮಹಾಪಂಡಿತ. ಸಮಸ್ತ ಭಾಷೆಗಳಲ್ಲಿ ಸಮಾನ ಅ
ಧರ್ಮದಿಂದ ಜೈನ. ಸದಭಿಸ್ತುತವಾದ ಪಂಕುಂದದ ನಾಡಿನವನು. ಕ
ಕಾಸಾರದಲ್ಲಿ ಮಾತ್ರ ನೆಲೆ ನಿಲ್ಲಬಹುದು ಎಂತಲೇ ಇವನು ಮಾನ್ಯ ಖ
ಆಗಮಿಸಿದನು. 'ಗುಣಿನಾ ಗುಣಜ್ಞೋರಮತೆ' ಎಂಬಂತೆ ನೃಪತುಂಗ
ಜಯಾಶ್ವರ ಮಾನ್ಯ ಖೇಟದ ಸಮಾಗಮ ಕಾವ್ಯ ಸೃಷ್ಟಿಗೆ ಕಾರಣವಾ
ಶ್ರೀ ವಿಜಯನು ತನ್ನ ಅಭಿಪ್ರಾಯಗಳನ್ನು ಮಂಡಿಸಿ ನೃಪತುಂಗನ ಅಭಿಮ
ತಿದ್ದು ಪಾಟುಗಳನ್ನು ಮಾಡಿಕೊಳ್ಳುತ್ತಿದ್ದನು. ಇವನಾದರೂ ತನ್ನ ಆಶ್ರಂ
ನಂತೆ ಪರಧರ್ಮದಲ್ಲಿ ಅಪಾರ ಗೌರವ ವುಳ್ಳವನು. 'ಚಂದ್ರಪ್ರಭ' ಪು
ಕರ್ತೃವೂ ಪಾಂಡಿತ್ಯದಲ್ಲಿ ಆತ್ಮ ವಿಶ್ವಾಸವುಳ್ಳವನೂ ಆದ ಇವನು
ವ್ಯವಹಾರದಲ್ಲಿಯೂ ನಿಷ್ಣಾತನಾಗಿದ್ದನು. ತನ್ನ ಪ್ರಭುವಿನ ರಾಜಧಾ
ವಿವೇಕ ಬೃಹಸ್ಪತಿಯ ನಗರವೆಂದು ಅಭಿಮಾನದಿಂದ ಹೇಳಿದ್ದಾನೆ. ಉ
ಹಾಗೂ ಸಾಹಿತ್ಯ ವಿದ್ಯೆಗಳೆರಡೂ ಇವನಲ್ಲಿ ಆಶ್ರಯ ಪಡೆದಿದ್ದವು. ಕಾವ್
ಲಕ್ಷ್ಯಗಳಲ್ಲಿಯಂತೂ ಕವಿ ಬ್ರಹ್ಮ ಎಂತಲೇ ಮಂಗರಸ, ದುರ್ಗಸಿಂಹ, ಕ
ಮುಂತಾದ ಪ್ರತಿಭಾವಂತರಾದ ಕವಿಗಳು ಇವನನ್ನು ತಮ್ಮ ಕಾವ್ಯದಲ್ಲಿ
ಸ್ಮರಿಸಿದ್ದಾರೆ.

ವಿದ್ಯಾ ಬೃಹಸ್ಪತಿಯ ಮನ್ನಣೆ ಪಡೆಯಬೇಕಾದರೆ ಶ್ರೀ ವಿ
ಮಹಾ ಪುರುಷನಾಗಿರಲೇ ಬೇಕು, ಕಾರಣಿಕನಾಗಿರಲೇಬೇಕು. ತನ್ನ
ಕವಿಗಳಾದ ವಿಮಲೋದಯ ನಾಗಾರ್ಜುನರನ್ನು ಮನವಾರೆ ಸ್ಮರಿಸಿದ
ಗುಣ ಗ್ರಾಹಕ ನಾಗಿರಲೇಬೇಕು. ಅಭಿಮಾನಿಯಾದರೂ ವಿನೀತವಾದ,

ನಿಷ್ಠನಾದರೂ, ಪರ ಧರ್ಮಗಳಲ್ಲಿ ಆದರವುಳ್ಳವನಾದ. ವ್ರತ ನಿಶ್ಚಿತನಾದ ಊ ತಪ್ಪುಗಳನ್ನು ತಿದ್ದಿಕೊಳ್ಳುವ ಗುಣವುಳ್ಳವನಾದ. ಇವನು ಸಾರಸ್ವತಪುರದ ಕೀರ್ತಿ ಕಲಶನಾದನು. ಕಾವ್ಯಕಾಶಕ್ಕೆ ಸೂರ್ಯನಾಗಿ ಬೆಳಗಿದನು. 'ಮಾರ್ಗ' ವೆಂಬ ಸಾಗರದ ಆಳಕ್ಕಿಳಿದು ಅಣಿ ಮುತ್ತುಗಳನ್ನಾಯ್ದು ತಂದನು.

ಇವನ ಅಮೋಘ ಕೃತಿ ಕವಿರಾಜ ಮಾರ್ಗ. ಇದು ಲಕ್ಷ್ಯ ಲಕ್ಷಣ ಸಮನ್ವಿತವಾದ ಗ್ರಂಥ. ಕನ್ನಡ ಕಾವ್ಯಮೀಮಾಂಸೆಗೆ ಅಡಿಗಲ್ಲು. ಕನ್ನಡ ಸಾಹಿತ್ಯದಲ್ಲಿ ಉಪಲಬ್ಧವಾದ ಆದ್ಯ ಲಕ್ಷಣ ಗ್ರಂಥ. ದಂಡಿ ಭಾಮಹರ ಚರ್ವಿತ ಚರ್ವಣವಿದಲ್ಲ. ಕೃತಿಯ ಉದ್ದಕ್ಕೂ ಇವನ ಸ್ವತಂತ್ರ ವಿಚಾರ ಧಾರೆ ಹರಿದಿದೆ. ಇವನು ಸೂಚಿಸಿದ 36 ನೆಯ ಧ್ವನ್ಯಾಲಂಕಾರ ಸಾರಸ್ವತ ಪ್ರಪಂಚಕ್ಕೆ ಇವನಿತ್ತ ಕೊಡಗೆ. ತನ್ನ ಕಾಲದ ಹಾಗೂ ಪೂರ್ವದ ಕನ್ನಡ ನಾಡಿನ ಪರಿಚಯವನ್ನೀಯುತ್ತ ನಾಡವರ ಹಿರಿಮೆ ಗರಿಮೆಗಳನ್ನು ಹೇಳಿದ್ದಾನೆ. ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳು ಎಂದು ಕೊಂಡಾಡಿದ್ದಾನೆ. ಸಂಪೂರ್ಣ ಕನ್ನಡ ಸಾಹಿತ್ಯವೇ ಇವನಿಗೆ ಋಣಿ. ಸಾಹಿತ್ಯ ವಾಹಿನಿಗೆ ಜಹ್ನುಮುನಿ ಇವನು. ಹುಚ್ಚು ಹೊಳೆಯನ್ನು ನಿಗ್ರಹಿಸಿದ್ದಾನೆ. ನೃಪತುಂಗ ದೇವನ ಅನುಮತದಿಂದ ಶ್ರೀ ವಿಜಯನ ಹೃನ್ಮನಗಳಿಂದ ತೂರಿಬಂದ ಮಾನ್ಯ ಕೃತಿಗೆ ಮಾನ್ಯ ಖೇಟದ ಮಣ್ಣಿನ ಸತ್ವವೇ ಕಾರಣ.

ಕಾಲಾನುಕ್ರಮದಲ್ಲಿ ಮಹಾ ಸಾಮ್ರಾಜ್ಯ ವಳಿಯಿತು. ಘನತೆವೆತ್ತ ರಾಷ್ಟ್ರಕೂಟರು ಇತಿಹಾಸದಲ್ಲಿ ಮಾತ್ರ ಉಳಿದುಕೊಂಡರು. ರಾಜನೇ ಇಲ್ಲದಾಗ ರಾಜಧಾನಿಯೆಲ್ಲಿ? ಆಶ್ರಯದಾತನೇ ಇಲ್ಲದಾಗ ಆಶ್ರಿತರೆಲ್ಲಿ? ವ್ಯಕ್ತಿಯ ಸಾರ್ವಭೌಮತ್ವವಡಗಿದರೂ ಮಾನ್ಯ ಖೇಟ ನಗರವು ಮಾತ್ರ ಮಾನ್ಯವಾಗಿಯೇ ಉಳಿಯಿತು. ಸುಮಾರು ಆರು ನೂರು ವರ್ಷ ಪೂರ್ತಿ ಶ್ರೀ ಮದಾನಂದ ತೀರ್ಥರ ಧರ್ಮ ಸಾಮ್ರಾಜ್ಯದ ಪೀಠವನ್ನು ಅಲಂಕರಿಸಿದ ಶ್ರೀ ಅಕ್ಷೋಭ್ಯ ತೀರ್ಥ ಶ್ರೀ ಪಾದಂಗಳವರು ಈ ಸ್ಥಾನವನ್ನು ಪಾವನ ಗೊಳಿಸಿದರು. ಅವರು ರುದ್ರಾಂಶರು. ಅವರ ಜ್ಞಾನ ಪ್ರಭೆ ಅಜ್ಞಾನ ತಿಮಿರವನ್ನು ದೂರೀಕರಿಸಿತು, ಅವರ ಶ್ರೀ ವೃಂದಾವನವು ಇಂದಿಗೂ ಮಳಖೇಡದಲ್ಲಿದೆ. ಅವರ ಪ್ರೀತಿಯ ಶಿಷ್ಯರೇ ಶ್ರೀ ಜಯರಾಯರು ಅಥವಾ ಟೀಕಾಚಾರ್ಯರು. ಜಯದ ಸಾಕಾರ ಮೂರ್ತಿ ಶ್ರೀ ಜಯರಾಯರು ಇಂದ್ರಾಂಶರು ಅರ್ಜುನ ದೇವನ ಅವತಾರ. "ಯತ್ರಯೋಗೀಶ್ವರೊ ಕೃಷ್ಣ ಯತ್ರ ಪಾರ್ಥೊ ಧನುರ್ಧರತತ್ರ ಶ್ರೀ ವಿಜಯೋರ್ಭೂತಿ......... ...." ಎಂಬಂತೆ ಎಲ್ಲಿ ಜಯಕಾಯರೋ ಅಲ್ಲಿ ಜಯ, ಅಲ್ಲಿ ಭಗವಂತನ ಸಾನ್ನಿಧ್ಯ. ದಯಾಳ್ವನು ಸಾಹಿತ್ಯ ಪ್ರಪಂಚದಲ್ಲಿ ವಿಜಯ ದುಂದುಭಿಯನ್ನು ಮೊಳಗಿಸಿದರೆ ಶ್ರೀ ಜಯತೀರ್ಥರು ಧರ್ಮಸಾಮ್ರಾಜ್ಯದಲ್ಲಿ

ಜಾಗೃತಿಯನ್ನುಂಟು ಮಾಡಿದರು. ಮಾನ್ಯ ಖೇಟಕ್ಕೆ ಜಯನಗರವೆಂಬ ಇನ್ನೊಂದು ಹೆಸರು ಇರಬೇಕಾದುದು ಅವಶ್ಯ.

ಮಂಗಳ ಪೀಡೆಯಲ್ಲಿ ಜನ್ಮ ತಳೆದು ಸಂಧ್ಯಾವಳಿ ಎಂಬಲ್ಲಿ ದೀಕ್ಷಾ ಬದ್ಧರಾಗಿ ಯರಗೋಳ ಗುಹೆಯಲ್ಲಿ ತಪಸ್ಸು ಮಾಡಿ ಶ್ರೀ ಮನ್ಮಧ್ವಾಚಾರ್ಯರ ಗ್ರಂಥಗಳಿಗೆ ಟೀಕೆಗಳನ್ನು ಬರೆದ ಶ್ರೀ ಟೀಕಾಕೃತ್ಪಾದರು ಕೊನೆಯದಾಗಿ ಆರಿಸಿ ಕೊಂಡ ದಿವ್ಯ ಸ್ಥಾನ ಮಾನ್ಯ ಖೇಟ. ಆ ಭೂಮಿ ಪಾವನವಾದುದು. ಶ್ರೀ ವಿದ್ಯಾರಣ್ಯರಂತಹ ಮಹಾಪಂಡಿತರು ಶ್ರೀ ಜಯರಾಯರ ಪಾಂಡಿತ್ಯ ಪರೀಕ್ಷೆಗಾಗಿ ಕೋರ್ಭವಾನ್ ಎಂದು ಪ್ರಶ್ನಿಸಿದರು. ಶ್ರೀ ಜಯರಾಯರು ಶಾಂತ ಚಿತ್ತದಿಂದ ಸ್ಪೋಽಹಂ ಎಂದು ಉತ್ತರಿಸಿದರು. ರೇಫಃಶ್ವಗತಃ ಎಂಬ ಮರು ಪ್ರಶ್ನೆಗೆ ತ್ವಯ್ಯೆವಾಪ ಹೃತಂಪುರಾ ಎಂದು ಪುನಃ ಉತ್ತರಿಸಿದರು. ಇದೊಂದೇ ನಿದರ್ಶನ ಸಾಕು ಶ್ರೀ ಟೀಕಾರಾಯರ ಪಾಂಡಿತ್ಯ ಪ್ರಕಾಶನಕ್ಕೆ ಇವರ ವಿಜಯಗಳಂತೂ ಆಸೇತು ಹಿಮಾಚಲ ಪರ್ಯಂತ ಕೊಲ್ಲಾಪುರದ ಶ್ರೀ ವಿದ್ಯಾರಣ್ಯ ಮಠದಲ್ಲಿ ಜಯಸ್ತಂಭವನ್ನು ನಿಲ್ಲಿಸಿದರು. ಅಹಮದಾಬಾದ ಪ್ರಾಂತದಲ್ಲಿದ್ದ ಬೌದ್ಧ ವಿಶ್ವ ವಿದ್ಯಾಲಯದ ಪಂಡಿತರನ್ನೆಲ್ಲ ದಿಙ್ಮೂಢರನ್ನಾಗಿಸಿದರು. ದಾಸವರೇಣ್ಯರಿಂದ ನುತಿಸಲ್ಪಟ್ಟ ಇವರು ಭಕ್ತ ಜನಕ್ಕೆ ಕಾಮಧೇನು. ವಿಷಯ ಲೋಲುಪರಿಗೆ ಘಟಸರ್ಪ. ಇವರ ನಿವಾಸವಿದ್ದ ಆ ಸ್ಥಾನ ಶ್ರೇಷ್ಠವಾದುದು.

ಅಳಿದುಳಿದ ಕೋಟೆ ಕೊತ್ತಲಗಳಿಂದ ಪ್ರಾಣದೇವರ ಮಲಯಾದ್ರಿ ಮಾಧವನ ಹಾಗೂ ಸಂತಾನ ಗೋಪಾಲ ಕೃಷ್ಣನ ಮಂದಿರಗಳಿಂದ ಶೋಭಿಸುವ ಆರು ಜನ ಯತೀಶ್ವರರ ವೃಂದಾವನಗಳಿಂದ ಪಾವನವಾದ ಈ ಮಾನ್ಯ ಖೇಟದ ಭೂಮಿ ಮೃಣ್ಮಯವಲ್ಲ ಚಿನ್ಮಯ.

# ಸರ್ವಜ್ಞನ ದೃಷ್ಟಿಯಲ್ಲಿ ಗುರುವಿನ ಸ್ಥಾನ (ಚಿಂತನೆ)

ಶ್ರೀ ಜಿ. ರಾಮಣ್ಣ ನ್ಯಾಕ್, ಅತಿಟ್ಟೆ.

ವಿಚಾರ ಸ್ವಾತಂತ್ರ್ಯ, ಸತ್ಯದಲ್ಲಿರುವ ಪ್ರೀತಿ ಮತ್ತು ಭಕ್ತಿ, ನ್ಯಾಯ-ನಿಷ್ಠುರತೆ ಮೊದಲಾದವುಗಳು ಸರ್ವಜ್ಞನ ತ್ರಿಪದಿಗಳಲ್ಲಿ ಕಂಡುಬರುವ ಮುಖ್ಯ ಗುಣಗಳು. ಈತನು 'ಹಲಿಗೆ ಬಳಪ ಹಿಡಿದವನಲ್ಲ' ಬರೆ ಬರೆದಂತೊಡೆದು ತೊಟ್ಟನೆ ನಿಟ್ಟಸಿಕಷ್ಟಪಟ್ಟವನಲ್ಲ.

ಸರ್ವಜ್ಞನೆಂಬವನು । ಗರ್ವದಿಂದಾದವನೇ ?
ಸರ್ವರೊಳೊಂದೊಂದು ನುಡಿಗಲಿತು, ವಿದ್ಯೆಯ
ಪರ್ವತವೇ ಆದ ಸರ್ವಜ್ಞ ॥

ಎಂದು ಅವನೇ ಹೇಳಿಕೊಂಡಿದ್ದಾನೆ. ಗ್ರಾಮೀಣ ಭಾಷೆಗಳನ್ನೇ ಹೆಚ್ಚಾಗಿ ಬಳಸಿ ತ್ರಿಪದಿಗಳಿಗೆ ಕನ್ನಡ ಸಾಹಿತ್ಯದಲ್ಲಿ ಶಾಶ್ವತವಾದ ಸ್ಥಾನವನ್ನು ಕೊಟ್ಟರೇ ಕೀರ್ತಿಯು ಸರ್ವಜ್ಞನಿಗೆ ಸಲ್ಲುತ್ತದೆ. 16 ನೆಯ ಶತಮಾನದಲ್ಲೇ ಲೌಕಿಕ ಹಾಗೂ ಅಲೌಕಿಕ ವಿಷಯಗಳನ್ನು ಮನನ ಮಾಡಿಕೊಂಡಿದ್ದ ಅವನ ಜ್ಞಾನ ಹೆಸರಿಗೆ ತಕ್ಕಂತೆ ಅಗಾಧ, ಅದ್ಭುತ.

ಸರ್ವಜ್ಞನು ತನ್ನ ತ್ರಿಪದಿಗಳಲ್ಲಿ ಗುರುವಿಗೆ ವಿಶೇಷವಾದ ಸ್ಥಾನವನ್ನು ಕೊಟ್ಟಿದ್ದಾನೆ. ಗುರುವೇ ಪ್ರತ್ಯಕ್ಷ ದೈವವೆಂದು ಸಾರಿದ್ದಾನೆಂದರೂ ಅತಿಶಯೋಕ್ತಿಯಾಗಲಾರದು.

ಬಂಧುಗಳು ಆದವರು । ಬಂದುಂಡು ಹೋಗುವರು ।
ಬಂಧನವ ಕಳೆಯಲರಿಯರು, ಗುರುವಿಂದ ।
ಬಂಧುಗಳು ಉಂಟೆ ಸರ್ವಜ್ಞ ॥

ಬಂಧು ಬಳಗದವರೆಲ್ಲ ಬಂದು ಊಟ ಮಾಡಿ ಹೋಗುವುದಕ್ಕಷ್ಟೇ ಹೊರತು ಬಂಧನವನ್ನು ಕಳೆಯಲಾರರು. ಆದರೆ ಎಲ್ಲಾ ಬಂಧನಗಳನ್ನು ಹೊಡೆದೋಡಿಸುವಂಥ ಶಕ್ತಿಯುಳ್ಳ ಗುರುವಿಗಿಂತ ಹೆಚ್ಚಿನ ಬಂಧುಗಳು ಯಾರೂ ಇಲ್ಲವೆಂದಿದ್ದಾನೆ. ಗುರುವು ತಂದೆಗೆ ಸಮಾನವೆಂದ ಈತನು,

ತಂದೆಗೂ ಗುರುವಿಗೂ । ಒಂದು ಅಂತರವುಂಟು ।
ತಂದೆ ತೋರುವನು ಸದ್ಗುರುವ, ಗುರುರಾಯ ।
ಬಂಧನವ ಕಳೆವ ಸರ್ವಜ್ಞ ॥

ತಂದೆಯು ಒಳ್ಳೆಯ ಗುರುವನ್ನು ತೋರಿಸಿದರೆ ಗುರುವರ್ಯನು ಬಂಧನವನ್ನು ಕಳೆಯುತ್ತಾನೆ.

ಮೊಸರು ಕಡೆಯಲು ಬೆಣ್ಣೆ । ಯೊಸೆದು ತೋರುವ ತೆರದಿ ।
ಹಸನಪ್ಪ ಗರುವಿನುಪದೇಶದಿಂ ಮುಕ್ತಿ
ವಶವಾಗದಿಹುದೆ ಸರ್ವಜ್ಞ ॥

ಮೊಸರನ್ನು ಕಡೆದಾಗ ಬೆಣ್ಣೆಯು ಗೋಚರವಾಗುವಂತೆ, ಒಳ್ಳೆಯ ಗುರುವಿನ ಉಪದೇಶದಿಂದ ಮುಕ್ತಿಯು ದೊರೆಯದೆ ಇರಲಾರದು.

ವಿದ್ಯೆ ಕಲಿತಡೆ ಇಲ್ಲ । ಬುದ್ಧಿ ಕಲಿತಡೆ ಇಲ್ಲ !
ಉದ್ಯೋಗ ಮಾಡಿದಡೆ ಇಲ್ಲ, ಗುರುಮುಖವ ।
ಇದ್ದಲ್ಲದಿಲ್ಲ ಸರ್ವಜ್ಞ ॥

ವಿದ್ಯೆ ಬುದ್ಧಿ ಕಲಿತರೂ, ಸತತೋದ್ಯೋಗಿಯಾದರೂ, ಗುರು ಮುಖದಿಂದ ಉಪದೇಶವಾಗದಿದ್ದರೆ ವ್ಯರ್ಥ.

ಮಂಡೆ ಬೋಳಾದೊಡಂ । ದಂಡ ಕೊಳ್ಳಿದೊಡಂ ।
ಹೆಂಡತಿಯ ಬಿಟ್ಟು ನಡೆದೊಡಂ ಗುರು ಮುಖವು ।
ಕಂಡಲ್ಲದಿಲ್ಲ ಸರ್ವಜ್ಞ ॥

ತಲೆ ಬೋಳಿಸಿಕೊಂಡು ಕೈಯಲ್ಲಿ ದಂಡ ಕಾಷ್ಟ ಪಿಡಿದು ಹೆಂಡತಿಯ ಬಿಟ್ಟು ಸನ್ಯಾಸಿಯಾದರೂ ಕೂಡ ಗುರೂಪದೇಶವಿಲ್ಲದಿದ್ದರೆ ವ್ಯರ್ಥ.

ಗುರುವಚನ ವುಪದೇಶ । ಗುರು ವಚನ ಪರಭಕ್ತಿ ।
ಗುರುವಚನ ಮೋಕ್ಷ ಪದ ವದುವೆ, ಗುರುವಚನವೆ ।
ಪರಮಾರ್ಥವಯ್ಯ ಸರ್ವಜ್ಞ ॥

ಗುರುಗಳಾಡಿದ ಮಾತೇ ಉಪದೇಶವು. ಅವರ ನುಡಿಗಳಲ್ಲಿ ಪರಮ ಭಕ್ತಿಯನ್ನಿಟ್ಟುಕೊಳ್ಳಬೇಕು.

ಗುರುಗಳ ಮಾತಿನಂತೆ ನಡೆದರೆ ಮೋಕ್ಷ ಪ್ರಾಪ್ತಿಯಾಗುವುದು. ಗುರು ವಾಕ್ಯವು ಮುಕ್ತಿ ಪ್ರದವು.

ಸಾಣೆ ಕಲ್ಲೊಳು ಗಂಧ । ಮಾಣದಲೆಸೆವಂತೆ
ಜಾಣ ಸದ್ಗುರುವಿನುಪದೇಶದಿಂದ ಮುಕ್ತಿ ।
ಕಾಣಿಸುತ್ತಿಹುದು ಸರ್ವಜ್ಞ ॥

ಸಾಣೆಕಲ್ಲ ಮೇಲೆ ಕೊರೆದು ತೇಯ್ದಾಗ ಗಂಧವು ನಿಶ್ಚಯವಾಗಿಯೂ ಬಂದು ಶೋಭಿಸುವುದು. ಅದರಂತೆ ಪಂಡಿತನೂ ಸತ್ಯಮಾರ್ಗನುಷ್ಠಾನಿಯೂ ಆದ ಗುರುಗಳು ಉಪದೇಶಿಸಿದರೆ ಶಿಷ್ಯನಿಗೆ ಮುಕ್ತಿಯು ಕಣ್ಗೆ ಕಾಣಿಸತೊಡಗುವುದು.

ಗುರುಪಾದ ಕೆರಗಿದರೆ । ಶಿರಸುತಾ ಮಣಿಯಕ್ಕು ।
ಪರಿಣಾಮವಕ್ಕು ಪದವಕ್ಕು, ಕೈಲಾಸ ।
ನೆರೆಮನೆಯು ಅಕ್ಕು ಸರ್ವಜ್ಞ ॥

ಗುರುವಿನ ಪಾದಗಳಲ್ಲಿ ನಮಸ್ಕರಿಸಿದರೆ ಮದ ಮತ್ಸರಾದಿಗಳು ನಾಶವಾಗುವುವು. ಪಾಪಗಳಳಿದು ಪುಣ್ಯ ಬರುವುದು. ಲೋಕದಲ್ಲಿ ದೊಡ್ಡ ಸ್ಥಾನ ಸಿಗುವುದು. ಕೈಲಾಸವು ನೆರೆಮನೆಯಷ್ಟು ಸಮೀಪವಾಗುವುದು.

ಗುರುವಿಂದ ಬಂಧುಗಳು । ಗುರುವಿಂದ ದೈವಗಳು ।
ಗುರುವಿಂದಲಿಹುದು ಪುಣ್ಯವದು, ಜಗಕೆಲ್ಲ ।
ಗುರುವಿಂದ ಮುಕ್ತಿ ಸರ್ವಜ್ಞ ॥

ಗುರುವಿನಿಂದಲೇ ಬಂಧು ಬಳಗದವರು ಬಂದು ಸೇರುವರು. ಗುರು ಪ್ರಸಾದ ದಿಂದ ಪೂಜ್ಯರೂ, ಹಿರಿಯರೂ, ದೈವವೂ, ಬಂದು ಸೇರುವುವು. ಗುರುವಿನ ಅನುಗ್ರಹದಿಂದಲೇ ಪುಣ್ಯ ಪ್ರಾಪ್ತಿಯಾಗುವುದು ಇಡೀ ಜಗತ್ತೆಲ್ಲ ಗುರುವಿಂದಲೇ ಉದ್ಧಾರವಾಗುವುದು.

ಗುರು ಅಂದರೆ ಯಾರು. ಅವನಲ್ಲಿ ಇರಬೇಕಾದ ಮುಖ್ಯ ಗುಣಗಳಾವುವು ಎಂಬುದಕ್ಕೆ ಸರ್ವಜ್ಞನು ಹೀಗೆ ನುಡಿದಿದ್ದಾನೆ.

ಪರ ತತ್ವ ತನ್ನೊಳಗೆ ವಿರವಿಲ್ಲದಿರುತಿರ್ದು ।
ಪರದೇಶಿಯಂತೆ ಇರುತಿಪ್ಪಯೋಗಿಯನು ।
ಪರಮ ಗುರುವೆಂಬೆ ಸರ್ವಜ್ಞ ॥

ಸಕಲವೇದ ಶಾಸ್ತ್ರಗಳ ತತ್ವಗಳನ್ನು ತನ್ನ ಹೃದಯದಲ್ಲಿ ಗೌಪ್ಯವಾಗಿಟ್ಟು ಕೊಂಡು ಪರದೇಶಿಯಂತೆ ತಿರುಗುತ್ತಿರುವ ಯೋಗಿಯೇ ಸರ್ವ ಶ್ರೇಷ್ಠವಾದ ಗುರುವು.

ಗುರುವನ್ನು ನಿಂದಿಸಿದವನು ಉನ್ನತಿಗೇರಲು ಸಾಧ್ಯವಿಲ್ಲ ಮತ್ತು ಅವನು ತನ್ನಗೋರಿಯನ್ನು ತಾನೇ ಅಗೆಯ ಬೇಕಾಗುತ್ತದೆ.

ಗುರು ಮನುಜನೆಂದವಗೆ । ಹರದ ಶಿಲೆಯೆಂದವಗೆ
ಕರುಣ ಪ್ರಸಾದವನು ಎಂಜಲೆಂದವಗೆ ।
ನರಕ ತಪ್ಪುವದೇ ಸರ್ವಜ್ಞ ॥

ಗುರುವನ್ನು ಅವನೊಬ್ಬ ಮಾನವನು ಎನ್ನುವವನಿಗೆ, ದೇವ ದೇವನಾದ ಮಹದೇವನನ್ನು ಶಿಲೆ ( ಕಲ್ಲಿನ ಮೂರ್ತಿ ) ಎನ್ನುವವನಿಗೆ ಪ್ರಸಾದವನ್ನು ಎಂಜಲು ಎಂದು ಹೀಯಾಳಿಸುವವನಿಗೆ ನರಕವು ಎಂದೂ ತಪ್ಪಲಾರದು.

ಒಂದೂರೊಳಿರಲು ಗುರು । ವಂದನೆಯ ಮಾಡದಲೆ
ಸಂದಿಸಿಕೊಳನುಣುತಿಪ್ಪವನ ಬದುಕು ।
ಹಂದಿಯಂತೆಂದ ಸರ್ವಜ್ಞ ॥

ಗುರುಗಳು ಅದೇ ಸ್ಥಾನದಲ್ಲಿದ್ದಾಗ ( ಶಿಷ್ಯನು ) ಅವರಿಗೆ ದಿನಾಲೂ ನಮಸ್ಕಾರಗಳನ್ನು ಅರ್ಪಿಸದೇ ಸೊಗಸಾಗಿ ಊಟ ಮಾಡಿ ಬಾಳಿದರೆ ಅವನು ಹಂದಿಯ ಬಾಳಿನಂತೆ ಎಂದು ತಿಳಿಯಬೇಕು.

ಹಿರಿಯ ನಾನೆನ ಬೇಡ । ಗುರುವ ನಿಂದಿಸ ಬೇಡ।
ಬರೆವರ ಕೂಡ ಹಗೆ ಬೇಡ ಬಂಗಾರ।
ದೆರವು ಬೇಡೆಂದ ಸರ್ವಜ್ಞ॥

(ನಾನು। ದೊಡ್ಡ ಮನುಷ್ಯನೆಂಬ ಅಹಂಕಾರವು ಮನುಷ್ಯನಿಗೆ ಇರತಕ್ಕದ್ದಲ್ಲ ಹೇಗೆ ಊರಕುಲಕರ್ಣಿಯೊಡನೆ ವೈಮನಸ್ಸು ಬೆಳೆಸ ಬಾರದೋ ಹೇಗೆ ಬಂಗಾರವನ್ನು ಒತ್ತೆ ಇಡಬಾರದೋ ಹಾಗೆಯೆ ಗುರುವನ್ನು ನಿಂದಿಸಬಾರದು.

---

ಕಿರು ಲೇಖನ

# ವೈನಿ ಮತ್ತು ಅವರ ಸಮಾಜ ಸೇವೆ

ಭಾರತ ಸರ್ಕಾರದ ವಾರ್ತಾ ಶಾಖೆ ಬೆಂಗಳೂರು.

ಸಮಾಜ ಸೇವೆ ದೇವರ ಸೇವೆಯೆಂದು ನಂಬಿ ಆ ದಿಸೆಯಲ್ಲಿ ಹಗಲಿರುಳು ಶ್ರಮಿಸಿದ ವ್ಯಕ್ತಿಗೆಗೌರವ ಪ್ರಶಸ್ತಿ ಬೇಕೇ? ಸರ್ಕಾರ ಅತ್ಯುತ್ತಮ ಸಮಾಜ ಸೇವಕಿ ಪ್ರಶಸ್ತಿ ನೀಡಿದ ಬಗ್ಗೆ ತಂತಿ ಸಂದೇಶ ಬಂದಾಗಲೂ ಆಕೆ ನಂಬಲಿಲ್ಲ. ಬದಲಾವಣೆಯೂ ಕಾಣಲಿಲ್ಲ.

ಗ್ರಾಮೀಣ ಪ್ರದೇಶದ ಮಹಿಳೆಯರ ಕಲ್ಯಾಣಕ್ಕಾಗಿ ತನ್ನ ಜೀವನವನ್ನೇ ಮುಡಿಪಾಗಿಟ್ಟಿರುವ ವ್ಯಕ್ತಿ ಶ್ರೀಮತಿ ವತ್ಸಲಾ ತಾಯಿ ಮಾಧವರಾವ್ ವೈದ್ಯ. ಅರವತ್ತ ಮೂರು ವರ್ಷದ ಈ ಮಹಿಳೆ ಕಳೆದ ಮೂರು -ನಾಲ್ಕು ದಶಕಗಳಲ್ಲಿ ಪ್ರತಿ-ಫಲಾಪೇಕ್ಷೆ ಇಲ್ಲದೆ ಸಮಾಜ ಕಲ್ಯಾಣಕ್ಕಾಗಿ ಶ್ರಮಿಸಿದ್ದಾರೆ. ಸಮಾಜ ಸೇವೆ ಮತ್ತು ರಾಜಕೀಯ ಬೇರೆ ಬೇರೆ ಕ್ಷೇತ್ರಗಳೆಂಬುದರಲ್ಲಿ ವಿಶ್ವಾಸವುಳ್ಳ ಶ್ರೀಮತಿ ವೈದ್ಯ ನಿಸ್ವಾರ್ಥ ನಿಷ್ಠೆಯಿಂದ ಕೆಲಸ ಮಾಡಿ ಗ್ರಾಮಾಂತರ ಪ್ರದೇಶಗಳ ಮಹಿಳೆಯರ ಜೀವನ ಚಿತ್ರ ಬದಲಾವಣೆಗೆ ಕಾರಣರಾಗಿದ್ದಾರೆ. 'ವೈನಿ, ಯೆಂದೇ ಜನಪ್ರಿಯರಾಗಿರುವ ಈಕೆ 1944ರಲ್ಲಿ ಬಿ. ಎ. (ಆನರ್ಸ್) ಮುಗಿಸಿ ಅನಂತರ ಸೇವಾದಳ ನೇತಾ ಡಾ॥ಹರ್ಡಿಕರರ ಮಾರ್ಗದರ್ಶನದಲ್ಲಿ ನಡೆದರು ಗೋಕಾಕ್ ತಾಲ್ಲೂಕಿನ ಶತಿದೂರದ ಸಮೂಹ ಮಾಧ್ಯಮಗಳ ಸೌಲಭ್ಯಗಳಿಂದ ವಂಚಿತವಾದ ಗ್ರಾಮಾಂತರ ಪ್ರದೇಶಗಳ ಅಭಿವೃದ್ಧಿಗಾಗಿ ಸತತವಾಗಿ ದುಡಿದರು. ಜನತೆಯಲ್ಲಿ ಬದಲಾವಣೆ ತರಲು ಯೋಚಿಸಿ ಆ ದಿಶೆಯಲ್ಲಿ ಸಫಲ ಪ್ರಯತ್ನ ನಡೆಸಿದರು, ಆರ್ಥಿಕ ಮತ್ತು ವೈಜ್ಞಾನಿಕ ಮನೋಭಾವ ಬೆಳವಣಿಗೆ ಅವಿದ್ಯಾವಂತರಿಗೆ ಶಿಕ್ಷಣ ಮಹಿಳಾ ಮಂಡಳಿಗಳ ಸ್ಥಾಪನೆ ಅವುಗಳ ರಕ್ಷಣೆಯುತ ಶ್ರಮಿಸಿದರು. ಸುಮಾರು 25-ಹಳ್ಳಿಗಳಲ್ಲಿ ಮಹಿಳಾ ಮಂಡಳಿಗಳನ್ನು ಸ್ಥಾಪಿಸಿದರು. ಕೆನಡಾ, ಇಂಗ್ಲೆಂಡ್ ಇತ್ಯಾದಿ ವಿವಿಧ ದೇಶಗಳಿಂದ ಆರ್ಥಿಕ ಸಹಾಯ ದೊರಕಿಸಿ ಕೊಟ್ಟರು. ಪ್ರಸೂತಿ ಕೇಂದ್ರ, ಬಾಲವಾಡಿ , ನಿರುದ್ಯೋಗಿಗಳಿಗೆ ಸ್ವಂತ ಉದ್ಯೋಗಾವಕಾಶಗಳಲ್ಲಿ ತರಪೇತಿ ಸೌಲಭ್ಯ ವಯಸ್ಕರ ಶಿಕ್ಷಣ ಕೇಂದ್ರಗಳ ಪ್ರಾರಂಭ ಮಾಡುವುದರಿಂದಾಗಿ ಹಳ್ಳಿಗಳ ಸರ್ವತೋಮುಖ ಅಭಿವೃದ್ಧಿಗೆ ನೆರವು ನೀಡಿದರು.

ಶ್ರೀ ಮತಿ ವೈದ್ಯ ವೈದ್ಯಾಧಿಕಾರಿಗಳ ಶ್ರೀ ಮತಿ ಎಂದೇ ಹಳ್ಳಿಗರಿಗೆ ವೈದ್ಯಕೀಯ ಸೌಲಭ್ಯ ಕಲಿಸುವುದು ಅವರಿಗೆ ಸುಲಭದ ಮಾತಾಯಿತು. ಹಳ್ಳಿಯ ಮಹಿಳೆಯರು ಹಸು ಎಮ್ಮೆಗಳನ್ನು ಕೊಂಡು ತಮ್ಮ ಆರ್ಥಿಕ ಸುಧಾರಿಸಿಕೊಳ್ಳುವಂತೆ ಸೊದಲು

ಬಡ್ಡಿ ರಹಿತ ಸಾಲವನ್ನು ಒದಗಿಸಲಾಯಿತು. ಪೈಸು ಉತ್ಪಾದಕರ ಸಹಕಾರ ಸಂಘವನ್ನು ಸ್ಥಾಪಿಸಲಾಯಿತು. ಶ್ರೀ ಮತಿ ವೈದ್ಯಾ ಮತ್ತು ಅವರ ಸಂಗಡಿಗರ ಪ್ರಯತ್ನದಿಂದ ಇಂದ 19,000 ಮಕ್ಕಳಿಗೆ ಬಾಲವಾಡಿ ಶಿಶು ವಿಹಾರ ಕೇಂದ್ರಗಳ ನೆರವು ದೊರೆತಿದೆ. ಸ್ವಯಂಚಾಲಿತ ಸಂಸ್ಥೆಗಳು ಹೆಚ್ಚು ಪರಿಣಾಮಕಾರಿಯಾಗಿ ಕೆಲಸ ಮಾಡುವಂತಾಗಲು ಶ್ರಮಿಸಿದ್ದಾರೆ.

ಗೋಕಾಕ್ ಸುತ್ತಮುತ್ತಲ ಮಹಿಳಾ ಕೇಂದ್ರ 1964 ರಿಂದೀಚೆಗೆ — 10,500 ಸುಖಕರ ಪ್ರಸೂತಿಗಳನ್ನು ವ್ಯವಸ್ಥೆ ಮಾಡಿದೆ. 1970 ರಲ್ಲಿ ಕುಟುಂಬ ಯೋಜನಾ ಶಸ್ತ್ರ ಚಿಕಿತ್ಸೆಯನ್ನು ಮಾಡಿಸಿಕೊಂಡ ಎಲ್ಲ ಮಹಿಳೆಯರಿಗೆ 10 ರೂ.ಗಳನ್ನು ಮಹಿಳಾ ಮಂಡಲಿ ನೀಡಿದೆ. ಕುಷ್ಠ ರೋಗಿಗಳನ್ನು ಗುರ್ತಿಸುವುದು, ಗ್ರಾಮಾಂತರ ಜನರಿಗೆ ಕಾನೂನು ನೆರವು ನೀಡುವುದು, ದಂತ ಚಿಕಿತ್ಸಾ ಪರೀಕ್ಷಾ ಶಿಬಿರ ಇತ್ಯಾದಿಗಳನ್ನು ಮಹಿಳಾ ಮಂಡಲಿಗಳು ನಡೆಸಿಕೊಟ್ಟಿವೆ. ಮಹಿಳಾ — ಮಂಡಲಿಗಳ ಕೆಲವು ಹಳ್ಳಿಗಳನ್ನು ದತ್ತು ತೆಗೆದು ಕೊಂಡಿದೆ ಅವುಗಳ ಪೂರ್ಣ ಬೆಳವಣಿಗೆಗೆ ಪ್ರಯತ್ನಿಸಿದೆ.

ಶ್ರೀ ಮತಿ ವೈದ್ಯಾರಂತಹ ಸಮಾಜ ಕಾರ್ಯ ಕರ್ತರಿದ್ದರೆ ಸಮಾಜೋದ್ಧಾರ, ಗಾಂಧೀಜಿ ಕಂಡ ‘ ಸ್ವಾವಲಂಬಿ ಗ್ರಾಮ ’ ಸಾಧ್ಯದ ಮಾತಲ್ಲವೇ.

( ಮುಂದುವರೆದಿದೆ )

# ಕೃಷಿಯಲ್ಲಿ ಮಹಿಳೆ

–ಡಿ. ವೆಂಕಟರಾವ್ ಎಂ.ಎ. ಪ್ರಾಚಾರ್ಯರು. ಜಂದಸ, ಹಾಸನ.

ಕೂಲಿಯ ಪಕ್ಷಪಾತ:— ಕೃಷಿ ಕೆಲಸ ಮಾಡುವ ಮಹಿಳೆಯರ ಅನುಭವಿಸುವ ಇನ್ನೊಂದು ಶೋಷಣೆ ಎಂದರೆ ಕೂಲಿಯ ಪಕ್ಷಪಾತ. ಕೂಲಿ ಪಾವತಿಯ ವಿಧಾನವೇ ಮಹಿಳಾ ಕೃಷಿಕಾರ್ಮಿಕರ ಶೋಷಣೆಯ ಮೂಲ ಎನ್ನಬಹುದು. ಪುರುಷರಿಗೆ ಹೆಚ್ಚು ಕೂಲಿ, ಮಹಿಳೆಯರಿಗೆ ಕಡಿಮೆ ಕೂಲಿ ಎಂದು ಸರ್ಕಾರವೇ ನಿಗದಿಪಡಿಸಿರುವುದರಿಂದ ಭೂಮಾಲೀಕರು ಕೈ ಎತ್ತಿ ಕೊಡುವುದು ದೂರದ ಮಾತು. ಆಹಾರ ವಸ್ತುಗಳ ಬೆಲೆಗಳು ಗಗನಕ್ಕೇರುತ್ತಿದ್ದರೂ ಮಹಿಳಾ ಕೃಷಿ ಕಾರ್ಮಿಕರ ಕೂಲಿ ದರ ಮಾತ್ರ ಇನ್ನೂ ಪಾತಾಳದಲ್ಲಿಯೇ ಇದೆ. ಗಂಡಾಳುಗಳು ಮಾಡುವ ಕೆಲವು ಕಾರ್ಯಗಳನ್ನೇ ಹೆಣ್ಣಾಳುಗಳು ಮಾಡಿದಾಗಲೂ ಅವರಿಗೆ ಗಂಡಾಳುಗಳು ಪಡೆಯುವಷ್ಟು ಕೂಲಿ ಸಿಗುವುದಿಲ್ಲ. ಆದಾಗ್ಯೂ ಕುಟುಂಬದ ವೆಚ್ಚವನ್ನು ಭರಿಸುವ ಸಲುವಾಗಿ ಮಹಿಳೆಯರು ಅನಿವಾರ್ಯವಾಗಿ ದುಡಿಯುತ್ತಾರೆ. ಮಹಿಳೆಯರ ದುಡಿಮೆ ಅಗ್ಗದಲ್ಲಿ ಸಿಗುತ್ತದೆ ಎಂದು ಅವರನ್ನೇ ಹೆಚ್ಚು ಹೆಚ್ಚಾಗಿ ನೇಮಿಸಿಕೊಳ್ಳುವುದೂ ಉಂಟು. ಒಂದೇ ಕಡೆ ಇಡೀ ಕುಟುಂಬ ದುಡಿದಾಗ ಎಷ್ಟೋ ಬಾರಿ ಕೂಲಿ ಹಣ ಅವರ ಕೈಗೆ ಬರದೆ ಗಂಡಂದಿರ ಕೈಗೆ ಹೋಗುವುದುಂಟು. ಆಗ ದುಡಿದ ಮಹಿಳೆಯರಿಗೆ ಉಪವಾಸವೇ ಗತಿ.

ಕೂಲಿಯ ತಾರತಮ್ಯಕ್ಕೆ ಕೆಲವು ಅಂಶಗಳು ಪ್ರಮುಖ ಕಾರಣಗಳಾಗಿ ಪರಿಣಮಿಸಿವೆ, ಅವೆಂದರೆ:—1) ಮಹಿಳಾ ಕೃಷಿಕಾರ್ಮಿಕರು ಸಂಘಟನ ಶಕ್ತಿ ಪಡೆದಿರುವುದಿಲ್ಲ. ಇವರಲ್ಲಿ ಮುಂದಾಳುತನವಿಲ್ಲ. ಕಾರ್ಮಿಕ ಸಂಘಗಳನ್ನು ನೇಮಿಸಿ ಕೊಂಡು ಇವರ ಹಕ್ಕುಗಳ ಈಡೇರಿಕೆಗೆ ಹೊಡೆದಾಡುವುದಿಲ್ಲ.

2) ಉಳಲು ದೊರೆಯುವ ಭೂಮಿಗಿಂತಲೂ ಕೃಷಿ ಕಾರ್ಮಿಕರ ಪ್ರಮಾಣ ಹೆಚ್ಚು.

3) ಕೃಷಿ ಹಿಡುವಳಿಗಳು ದೊಡ್ಡದಾಗಿಲ್ಲದಿರುವುದು.

4) ಮಹಿಳಾ ಕೃಷಿ ಕಾರ್ಮಿಕರು ಒಂದೆಡೆ ಇರದೆ ಚಲ್ಲಾಪಿಲ್ಲಿಯಾಗಿರುವುದು.

5) ಮಹಿಳಾ ಕೃಷಿ ಕಾರ್ಮಿಕರು ಅವಿದ್ಯಾವಂತರಾಗಿದ್ದು, ಭೂಮಾಲೀಕರೊಂದಿಗೆ ಹೆಚ್ಚು ಕೂಲಿಪಡೆಯಲು ಚೌಕಾಸಿ ಮಾಡುವ ಶಕ್ತಿ ಹೊಂದಿರುವುದಿಲ್ಲ ಮತ್ತು

6) ಮಹಿಳಾ ಕೃಷಿಕಾರ್ಮಿಕರು ಭೂಮಾಲೀಕರ ಹಂಗಿಗೆ ಒಳಪಟ್ಟಿರುತ್ತಾರೆ. ಇದರಿಂದ ಮಾಲೀಕರೇ ನಿರ್ಧರಿಸಿದ ಕೂಲಿಗೆ ಅನ್ವಯವಾಗಿ ಅವರು ಕೆಲಸಮಾಡಲು

ಒಪ್ಪಲೇ ಬೇಕು. ಜೊತೆಗೆ ಭೂಮಾಲೀಕರು ಸಮಾಜದ ಮೇಲು ಜಾತಿಗೆ ಸೇರಿರುವುದು ಮಹಿಳಾ ಕೃಷಿಕಾರ್ಮಿಕರು ಕೆಳಜಾತಿಗೆ ಸೇರಿರುವುದರಿಂದ ಅವರ ಶೋಷಣೆ ಇಲ್ಲಿ ಅತಿ ಸುಲಭ. ಈ ಎಲ್ಲಾ ಅಂಶಗಳೂ ಮಹಿಳಾ ಕೃಷಿಕಾರ್ಮಿಕರ ಕೂಲಿಯ ಕಡಿಮೆ ಮಟ್ಟಕ್ಕೆ ಪೂರಕವಾಗಿವೆ. ಈ ದಿಸೆಯಲ್ಲಿ ಕೂಲಿಭಿನ್ನತೆಯ ಬಗ್ಗೆ ಸಂವಿಧಾನ ನೀಡಿದ ಸಲಹೆಗಳು ಫಲಪ್ರದವಾಗಿಲ್ಲ.

ಕೂಲಿದರವು ಒಂದ ರಾಷ್ಟ್ರದ ಆರ್ಥಿಕಾಭಿವೃದ್ಧಿಯ ಅಳತೆಗೋಲು. ದುರ್ದೈವ ವೆಂದರೆ ಭಾರತದಲ್ಲಿ ಕೃಷಿಕೂಲಿದರವು ಹಿಂದಿನಿಂದ ಸಾಂಪ್ರದಾಯಿಕವಾಗಿ ಬಂದಿರುವ ಪದ್ಧತಿಗಳನ್ನು ಮುಂದುವರಿಸಿಕೊಂಡು ಹೋಗುವ ಒಂದು ಯಾಂತ್ರಿಕ ಕ್ರಿಯೆ ಯಾಗಿದೆಯೇ ಹೊರತು, ಜೀವನ ಮಟ್ಟ ಹಾಗೂ ಉತ್ಪಾದನೆಗೆ ತಕ್ಕಂತೆ ಕೂಲಿ ದರವನ್ನು ನಿಷ್ಕರ್ಷೆಮಾಡುವ ಕ್ರಮ ಬೆಳೆದು ಬಂದಿಲ್ಲ. ಕಾರ್ಮಿಕರ ಬೇಡಿಕೆ ಮತ್ತು ಪೂರೈಕೆಗಳಗನುಸಾರವಾಗಿ ಕೃಷಿ ಕೂಲಿ ನಿರ್ಧಾರವಾದಲ್ಲಿ ಬಡ ಮಹಿಳಾ ಕಾರ್ಮಿ ಕರ ಸ್ಥಿತಿಯಲ್ಲಿ ಸ್ವಲ್ಪ ಮಟ್ಟಿಗಾದರೂ ಸುಧಾರಣೆ ಕಾಣಲು ಸಾಧ್ಯ. ಆದರೆ, ಇದಕ್ಕೆ ಹೊರತಾಗಿ ಕೃಷಿ ಕೂಲಿಯು ಸಂಪ್ರದಾಯಗಳಿಗನುಸಾರವಾಗಿಯೇ ನಿರ್ಧಾರವಾಗು ವುದು ಮಹಿಳಾ ಕೃಷಿ ಕಾರ್ಮಿಕರ ಹೀನ ಸ್ಥಿತಿಗೆ ಮುಖ್ಯ ಕಾರಣ. ಕೈಗಾರಿಕಾ ಕ್ಷೇತ್ರದಲ್ಲಿ ಕಾರ್ಯಗಳನ್ನು ಶಿಸ್ತೀಕರಣಗೊಳಿಸುವುದು ಸುಲಭ. ಆದರೆ, ಕೃಷಿ ಕ್ಷೇತ್ರದಲ್ಲಿ ಇದು ಕಷ್ಟ. ಕೆಲವು ಕಾರ್ಯಗಳಲ್ಲಿ ಮಾತ್ರ ಇದನ್ನು ಸಾಧಿಸಬಹುದು. ಉದಾಹರಣೆಗೆ ಹತ್ತಿ ಬಿಡಿಸುವುದು, ನೆಲಗಡಲೆ, ಆಲೂಗೆಡ್ಡೆ ಇತ್ಯಾದಿಗಳನ್ನು ಅಗೆದು, ಅವನ್ನು ಬಿಡಿಸುವುದು ಇತ್ಯಾದಿ ಈ ಕಾರ್ಯಗಳಲ್ಲಿ ಗುತ್ತಿಗೆ ಕೂಲಿ ವಾಡಿಕೆಯಲ್ಲಿದೆ. ಇಷ್ಟು ಚೀಲ ಹತ್ತಿ ಬಿಡಿಸಿದರೆ ಇಷ್ಟು ಕೂಲಿ ಎಂದು ನಿಗದಿ ಮಾಡಲಾಗಿರುತ್ತದೆ. ಹೆಚ್ಚು ಹತ್ತಿ ಬಿಡಿಸಿದವರು ಹೆಚ್ಚು ಕೂಲಿ ಪಡೆಯುತ್ತಾರೆ. ಇಲ್ಲಿ ಗುತ್ತಿಗೆ ಕೂಲಿ ಕೊಡುವ ಉದ್ದೇಶ ಕೆಲಸದಲ್ಲಿ ಹೆಚ್ಚು ಆಸಕ್ತಿ ತೋರಿಸಲಿ ಎನ್ನುವುದು. ಆದರೆ ದಿನ ಗೂಲಿಯ ಮೇಲೆ ನೇಮಕ ಮಾಡಿಕೊಳ್ಳುವ ಸಂದರ್ಭ ಗಳಲ್ಲಿ ಇದು ಸಾಧ್ಯವಾಗಲಾರದು.

ಮಹಿಳಾ ಕಾರ್ಮಿಕರು ಪಡೆಯುವ ಕೃಷಿ ಕೂಲಿಯು ಕೆಲಸ ಮತ್ತು ಋತು ಗಳಿಗನು ಸಾರವಾಗಿ ಮಾತ್ರವೇ ಅಲ್ಲದೆ ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ಹೆಚ್ಚು ಕಡಿಮೆ ರಾಜ್ಯದಿಂದ ರಾಜ್ಯಕ್ಕೆ ರಾಜ್ಯದಲ್ಲೇ ಜಿಲ್ಲೆಯಿಂದ ಮತ್ತೊಂದು ಜಿಲ್ಲೆಗೆ ಜಿಲ್ಲೆಯಲ್ಲೇ ಒಂದು ತಾಲ್ಲೂಕಿನಿಂದ ಇನ್ನೊಂದು ತಾಲ್ಲೂಕಿಗೆ. ಕೃಷಿ ಕೂಲಿಯಲ್ಲಿ ವ್ಯತ್ಯಾಸ ಕಾಣಬಹುದು. ಭಾರತದಲ್ಲಿ ಕೃಷಿ ವಿಧಾನವು ಎಲ್ಲಾ ಕಡೆಯೂ ಒಂದೇ ಬಗೆಯಾ- ಗಿರುವುದರಿಂದ ಕೃಷಿ ಕೂಲಿಯಲ್ಲಿ ಏಕರೂಪತೆಯನ್ನು ತರುವುದು ಕಷ್ಟ. ಇದರಲ್ಲಿ ಇನ್ನು ವಿಚಿತ್ರವೆಂದರೆ ಒಂದೇ ಪ್ರದೇಶದಲ್ಲಿ ಬೇರೆ ಬೇರೆ ಕೂಲಿ ಕೊಡುವ ಪದ್ಧತಿಯೂ

ಉಂಟು. ಗುಜರಾತ್, ಮಹಾರಾಷ್ಟ್ರ, ಕೇರಳ, ಮದರಾಸ್, ಮಲಬಾರ್,– ಮಧ್ಯ ಪ್ರದೇಶಗಳಲ್ಲಿ ಮಹಿಳಾ ಕೃಷಿ ಕಾರ್ಮಿಕರ ಪರಿಸ್ಥಿತಿ ಹೆಚ್ಚು ಕಡಿಮೆ ಗುಲಾಮರಂತಿದೆ. ಮಾಲೀಕರು ಸ್ವಪ್ರಯೋಜನಕ್ಕಾಗಿ ಅವರನ್ನು ದುಡಿತದ ಕತ್ತೆಯಂತೆ ಬಳಸಿಕೊಳ್ಳುತ್ತಿದ್ದಾರೆ. ಅಂಕಿ ಅಂಶ ಗಣತಿ ಅಧಿಕಾರಿಗಳ ಲೆಕ್ಕದಲ್ಲಿ ಮಹಿಳಾ ಕೃಷಿ ಕಾರ್ಮಿಕರು ಬರುವುದೇ ಇಲ್ಲ. ಅವರ ಲೆಕ್ಕದಲ್ಲಿ ಇವರಿಗೆ ನೆಲವು ಇಲ್ಲವೇ 'ಡಿಪೆಂಡೆಂಟ್' ಕಲಮಿನಲ್ಲಿ ಸ್ಥಾನ. ಭೂಒಡತಿಯರು ಮಾತ್ರ ಅವರ ಲೆಕ್ಕದಲ್ಲಿ ಕೃಷಿ ಕಸುಬಿನ ಮಹಿಳೆಯರು. ಇಷ್ಟೇ ಅಲ್ಲದೆ ಮಹಿಳಾ ಕೃಷಿಕಾರ್ಮಿಕರು ಅಪಾರವಾಗಿ ಲೈಂಗಿಕ ಶೋಷಣೆ, ಕ್ರೌರ್ಯವನ್ನು ಅನುಭವಿಸಬೇಕಾಗಿದೆ. ಜಮೀನ್ದಾರರ, ಅವರ ಮಕ್ಕಳ, ಎಸ್ಟೇಟ್ ಮಾಲೀಕರ, ಸೆರೆಗಾರರ ಅತ್ಯಾಚಾರಕ್ಕೆ ಇವರು ಗುರಿಯಾಗುತ್ತಾರೆ. ತಮ್ಮ ಗಂಡಂದಿರಿಂದ ಬೈಯ್ಗುಳ ಹೊಡೆತಗಳು ಇವರಿಗೆ ತಪ್ಪಿದ್ದಲ್ಲ. ಇವರಲ್ಲಿ ಬಹು ಪಾಲು ಜನ ಹಿಂದುಳಿದ ಜನಾಂಗಕ್ಕೆ ಸೇರಿದವರು. ಕೀಳದರ್ಜೆಯ ಜಾತಿಯಿಂದಾಗಿ ಇವರು ಆರ್ಥಿಕವಾಗಿ, ಸಾಮಾಜಿಕವಾಗಿ ಉಪೇಕ್ಷಿಸಲ್ಪಟ್ಟಿದ್ದಾರೆ ಜೊತೆಗೆ ಇವರು ಅನಕ್ಷರಸ್ಥರು ಮತ್ತು ಅಜ್ಞರು. ಹಿಂದಿನಿಂದಲೂ ನಡೆದುಕೊಂಡು ಬಂದಿರುವ ಪದ್ಧತಿಗಳನ್ನು ಮುಂದುವರಿಸಿಕೊಂಡು ಹೋಗಬೇಕೆನುವುದರಲ್ಲಿ ಅಚಲ ನಂಬಿಕೆಯುಳ್ಳವರು. ಮೂಢನಂಬಿಕೆಗಳದಾಸರು. ಅಮಾಯಕರಾದ ಇವರು ಅತಿ ಸುಲಭವಾಗಿ ಚಾಣಕ್ಷ ಶ್ರೀಮಂತರ ಶೋಷಣೆಗೆ ಗುರಿಯಾಗುತ್ತಾರೆ. ಪೌಷ್ಟಿಕಾಂಶಗಳುಳ್ಳ ಆಹಾರವನ್ನು ಸೇವಿಸದಿರುವುದು. ಅನಾರೋಗ್ಯಕರ ವಾತವಣದಲ್ಲಿ ಗಾಳಿ–ಬೆಳಕಿಲ್ಲದ ಗುಡಿಸಲುಗಳಲ್ಲಿ ವಾಸಿಸುವುದು ಬೆಚ್ಚಗೆ ಬಟ್ಟೆಗಳನ್ನು ಧರಿಸದಿರುವುದು ಇತ್ಯಾದಿ ಕಾರಣಗಳಿಂದ ಗ್ರಾಮೀಣ ಮಹಿಳಾ ಕಾರ್ಮಿಕರು ಬಹು ಬೇಗ ಅನೇಕ ರೋಗ–ಗಳಿಗೆ ತುತ್ತಾಗುತ್ತಾರೆ. ಮಹಿಳಾ ಕೈಗಾರಿಕಾ ಕಾರ್ಮಿಕರಿಗೆ ಹೋಲಿಸಿದರೆ, ಇವರ ಆದಾಯ ಮತ್ತು ಉಪಭೋಗದ ಮಟ್ಟ ಅತಿಕಡಿಮೆ. ಇದು ಬಡತನಕ್ಕೆ ಎಡೆಮಾಡಿ ಕೊಟ್ಟರೆ ಬಡತನವು ಕಡಿಮೆ ಜೀವನ ಮಟ್ಟಕ್ಕೆ ದಾರಿ ಮಾಡಿ ಕೊಡುತ್ತದೆ. – ಪಡೆದ ಕೂಲಿಯು ಜೀವನಾವಶ್ಯಕ ಖರ್ಚುಗಳನ್ನೇ ಪೂರೈಸಲು ಶಕ್ತವಾಗುವುದಿಲ್ಲವಾದ್ದರಿಂದ ಸಾಲ ಅನಿವಾರ್ಯವಾಗುತ್ತದೆ.

**ಸಂಘಟನೆಯ ಅಭಾವ:**—ಗ್ರಾಮೀಣ ಮಹಿಳಾ ಕಾರ್ಮಿಕರಲ್ಲಿ ಸಂಘಟನೆಯ ಅಭಾವ ಒಂದು ದೌರ್ಬಲ್ಯವಾಗಿದೆ. ಇದರ ಫಲವಾಗಿ ನ್ಯಾಯಸಮ್ಮತ ವೇತನದ ಗಳಿಕೆಯು ಮಹಿಳಾ ಕೃಷಿಕಾರ್ಮಿಕರಿಗೆ ಮರೀಚಿಕೆಯಾಗಿ ಪರಿಣಮಿಸಿದೆ. ಬೆಳಗಿನಿಂದ ಸಂಜೆಯವರೆಗೆ ದುಡಿಯುವ ಈ ಮಹಿಳೆಯರನ್ನ ಸಂಘಟಿಸುವುದು ಒಂದು ಸವಾಲಾಗಿದೆ. ಸಾಮೂಹಿಕವಾಗಿ ತಮ್ಮ ಬೇಡಿಕೆಗಳಿಗಾಗಿ ಚೌಕಾಸಿ ಮಾಡುವ ಒಕ್ಕೂಟತೆ ಇವರಲ್ಲಿ ಇಲ್ಲದಿರುವುದರಿಂದಾಗಿ ಸಂಘ–ಸಂಸ್ಥೆಗಳ ಮೂಲಕ ತಮ್ಮ ತೊಂದರೆಗಳನ್ನು ನಿವಾರಿಸಿಕೊಳ್ಳುವುದೂ ಇವರಿಗೆ ಕಷ್ಟಸಾಧ್ಯವಾಗಿದೆ. ಕಾಫಿ. ಟೀ. ರಬ್ಬರ್

ಪ್ಲಾಂಟೇಷನ್‌ಗಳಲ್ಲಿ ದುಡಿಯುವ ಲಕ್ಷಾಂತರ ಮಹಿಳೆಯರಲ್ಲಿ ಯಾವ ಬಗೆಯ ಕಾರ್ಮಿಕ ಸಂಘಟನೆ ಇಲ್ಲ ದಾರಿದ್ರ್ಯ' ಅನಾರೋಗ್ಯ. ನಿಕೃಷ್ಟ ಜೀವನ ಸ್ಥಿತಿ, ಶಿಕ್ಷಣದ ಕೊರತೆ, ಕೆಲವೆಡೆ ಬುದ್ಧಿಪೂರ್ವಕ ಶೋಷಣೆ, ಸಾಂಸ್ಕೃತಿಕ ಮತ್ತು ಮನರಂಜನೆಯ ಚಟುವಟಿಕೆಗಳ ಅಭಾವ ಇವರನ್ನು ಕಾಡುತ್ತಿವೆ. ಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಸೌಲಭ್ಯಗಳಿಂದ ಈ ಮಾರ್ಗದವರೂ ವಂಚಿತರಾಗಿದ್ದಾರೆ ಕೃಷಿಯ ಆಧಾರ ಸ್ಥಂಭದಂತಿರುವ ಗ್ರಾಮೀಣ ಮಹಿಳೆಯರ ಬದುಕು ಒಂದು ಹೋರಾಟ. ಅವರ ಜೀವನ ನಿಜಕ್ಕೂ ದುರ್ಭರ. ಅಸಂಘಟಿತ ಕ್ಷೇತ್ರವಲ್ಲಿ ದುಡಿಯುವ ಇವರು ಸಮಾಜದಲ್ಲಿ ಇಡಿಯಾಗಿ ಅಲಕ್ಷಿಸಲ್ಪಟ್ಟಿದ್ದಾರೆ.

ಕೃಷಿ ಕಾರ್ಮಿಕ ಮಹಿಳೆಯರ ಪೈಕಿ. ಪ್ಲಾಂಟೇಷನ್‌ಗಳಲ್ಲಿ ದುಡಿಯುವ ಮಹಿಳೆಯರ ಪಾಡಂತೂ ವರ್ಣಿಸಲಸದಳ. ಇವರಿಗೆ ಇಡೀವರ್ಷ ಕೆಲಸ ಇರುವುದಿಲ್ಲ. ಸುಗ್ಗಿಯಕಾಲ ಕಳೆದ ನಂತರ ನಾಟಿ ಹಾಕುವುದು, ಕಳೆಕೀಳುವುದು ಇತ್ಯಾದಿ ಸಣ್ಣ ಪುಟ್ಟ ಕೆಲಸಗಳು ಮುಗಿದ ಮೇಲೆ ಈ ಬೃಹತ್ ಕಾರ್ಮಿಕ ವೃಂದಕ್ಕೆ ಬೇಡಿಕೆ ಇಲ್ಲ. ಹೊಟ್ಟೆಪಾಡಿಗಾಗಿ ಇರುವ ದಿನಗೂಲಿಯ ಮೇಲೆ ಅಲ್ಲಿ ಇಲ್ಲಿ ದುಡಿಯ ಬೇಕು. ದಿನಗೂಲಿಯೂ ದೊರೆಯದಿದ್ದರೆ ಇವರ ಪಾಡು ನಾಯಿಗಿಂತಲೂಕಡೆ. ಯಜಮಾನನ್ನ ಮುಂದೆ ತಮ್ಮ ಕಷ್ಟಗಳನ್ನು ಹೇಳಿಕೊಳ್ಳುವುದಿರಲಿ. ಧ್ವನಿ ತೆಗೆದು ಮಾತನಾಡುವಂತೆಯೇ ಇಲ್ಲ ಹಸಿವಿನೊಂದಿಗೆ ಸೆಣಸಾಟ ನಡೆಸಲಾಗದ ಈ ಮಹಿಳೆಯರು ತುತ್ತಿನ ಚೀಲ ತುಂಬಿಸಿಕೊಳ್ಳಲು ನಗರ, ಪಟ್ಟಣಪ್ರದೇಶಗಳಿಗೆ ಕೆಲಸ ಹುಡುಕಿಕೊಂಡು ಬರುವುದುಂಟು, ದಿನದಿನಕ್ಕೂ ಇವರ ಬದುಕು ಅಸಹನೀಯವಾಗುತ್ತಿದೆ. ಉದ್ಯೋಗದ ಭದ್ರತೆ ಯಿಲ್ಲ; ಕೈ ತುಂಬ ಕೂಲಿಯಿಲ್ಲ, ಒಳ್ಳೆಯ ವಾತಾವರಣವಿಲ್ಲ. ಮೈ ತುಂಬಾ ದುಡಿತವಿದೆ, ಒಪ್ಪೊತ್ತಿನ ಅನ್ನಕ್ಕಾಗಿ ಇವರು ಸತತವಾಗಿಹೋರಾಟ ನಡೆಸಿದ್ದಾರೆ. ಮೈ, ಮನಸ್ಸಿಗೆ ತಗಲುವ ರೋಗಗಳೊಂದಿಗೆ ಸೆಣಸುತ್ತಿದ್ದಾರೆ. ದಿನ ದಿನಕ್ಕೂ ಈ ಮಹಿಳಾ ಕಾರ್ಮಿಕರ ಬದುಕು ದುಃಖಮಯವಾಗುತ್ತಿದೆ. ಬದುಕು ಇವರಿಗೊಂದು ಶಾಪವಾಗಿದೆ.

**ಮಹಿಳಾ ಕೃಷಿ ಕಾರ್ಮಿಕರು ಹಾಗೂ ಸರಕಾರ.**

ಭಾರತ ದೇಶದಲ್ಲಿರುವ ಸುಮಾರು 265 ದಶ ಲಕ್ಷ ಮಹಿಳೆಯರಲ್ಲಿ 32 ದಶ ಲಕ್ಷ ಮಹಿಳೆಯರು ಜೀವನದ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ. ಇದರಲ್ಲಿ, ಮೂರ ಲಕ್ಷಕ್ಕೂ ಹೆಚ್ಚಿನ ಮಹಿಣೆಯರು ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ಕೆಲಸ ಮಾಡುತ್ತಿದ್ದು ಉಳಿದವರು ಗ್ರಾಮೀಣ ಪ್ರದೇಶಗಳಲ್ಲಿ ದುಡಿಯುತ್ತಿದ್ದಾರೆ, ಇವರಲ್ಲಿ ಶೇಕಡ 83 ರಷ್ಟು ಮಹಿಳಾ ಕಾರ್ಮಿಕರು ಪ್ಲಾಂಟೇಷನ್ ಗಳಲ್ಲಿ ಕೆಲಸ ಮಾಡುತ್ತಿದ್ದಾರೆ, 1979 ರ ವೇಳೆಗೆ ನಮ್ಮ ದೇಶದಲ್ಲಿ ಟೀ ಪ್ಲಾಂಟೇಷನ್‌ಗಳಲ್ಲಿ

ದಿನದ ಸರಾಸರಿ ಮಹಿಳಾ ಕಾರ್ಮಿಕರು 372300 ರಷ್ಟಿದ್ದರು. (ಶೆ 46.14)
1981 ರ ಜನಗಣತಿಯ ಪ್ರಕಾರ 20900000 ಜನ ಮಹಿಳಾ ಕೃಷಿಕಾರ್ಮಿಕ ರಿಪ್ಪುದು ವರದಿಯಾಗಿದೆ. ಈ ಬೃಹತ್ ಕಾರ್ಮಿಕರು ವೃಂದದ ಸ್ಥಿತಿಯಲ್ಲಿ ಸುಧಾರಣೆ ತರುವ ಮೂಲಕ ಅವರಿಗೆ ಆರ್ಥಿಕ ಹಾಗೂ ಸಾಮಾಜಿಕ ಸ್ಥಾನಮಾನಗಳನ್ನು ಕಲ್ಪಿಸಿಕೊಡಲು ಸರಕಾರ ಹಲವಾರು ಪ್ರಯತ್ನಗಳನ್ನು ಕೈಗೊಳ್ಳುತ್ತಿದೆ.

ಹಿಂದುಳಿದ ವರ್ಗಕ್ಕೆ ಸೇರಿದ ಕೃಷಿಕಾರ್ಮಿಕರ ಸ್ಥಿತಿಗತಿಗಳು ಸುಧಾರಿಸಿದಾಗ ಮಾತ್ರವೇ ಭಾರತದ ಕೃಷಿ ಸುಧಾರಿಸಲು ಸಾಧ್ಯ ಎಂದು 1960ರಲ್ಲೇ ಭಾರತದ ಭೂ ಕೃಷಿ ಸುಧಾರಣಾ ಸಮಿತಿಯು ತೀರ್ಮಾನಿಸಿತ್ತು. ಭಾರತದ ಯೋಜನಾ ಕೃಷಿ ಕಾರ್ಮಿಕರಿಗೆ ಸರಿಯಾದ ಉದ್ಯೋಗ, ವೇತನ ದೊರೆಯದ ಹೊರತು ಯೋಜನೆಗಳನ್ವಯ ಪ್ರಗತಿ ಹೊಂದುವುದು ಕಷ್ಟ ಈ ಹಿನ್ನೆಲೆಯಲ್ಲಿ ಮಹಿಳಾ ಕೃಷಿಕಾರ್ಮಿಕರ ಸ್ಥಿತಿಗತಿಗಳ ಸುಧಾರಣೆಗೆ ಸಂಬಂಧಿಸಿದಂತೆ ಕೆಳಕಂಡ ಸಲಹೆಗಳನ್ನು ಮಾಡಲಾಗಿದೆ.

(1 **ಕೆಲಸದ ವೇಳೆಯ ನಿಯಂತ್ರಣ:**—ಮಹಿಳಾ ಕಾರ್ಮಿಕರು ಹೊಲಗದ್ದೆಗಳಲ್ಲಿ ಹೆಚ್ಚುಗಂಟೆಗಳ ಕಾಲ ದುಡಿಯ ಬೇಕಾಗುತ್ತದೆ. ಅವರ ಕೆಲಸದ ಅವಧಿಯಲ್ಲಿ ಯಾವನಿಯಮವೂ ಇಲ್ಲ ಈ ದಿಸೆಯಲ್ಲಿ ಶೋಷಣೆಯನ್ನು ತಪ್ಪಿಸುವ ಸಲುವಾಗಿ ಮಹಿಳೆಯರಿಗೆ 10ಗಂಟೆಗಳ ಕೆಲಸವನ್ನು ನಿಗದಿಪಡಿಸ ಬೇಕು. ಒಂದು ವೇಳೆ ಹೆಚ್ಚಿನಕಾಲ ದುಡಿಸಿಕೊಂಡಲ್ಲಿ ಸೂಕ್ತ ಸಂಭಾವನೆ ನೀಡ ಬೇಕು. ಬೆಳಿಗ್ಗೆ ಹಾಗೂ ಸಂಜೆಯ ಕೆಲಸದ ನಡುವೆ ಒಂದು ಗಂಟೆಯಷ್ಟು ವಿಶ್ರಾಂತಿ ಇರಬೇಕು ಚಳಿಗಾಲದಲ್ಲಿ ಹಾಗೂ ಮಳೆಗಾಲದಲ್ಲಿ ರಾತ್ರಿವೇಳೆ ಮಹಿಳೆಯರು ಕೆಲಸಮಾಡುವುದನ್ನು ಸಂಪೂರ್ಣವಾಗಿ ರದ್ದುಪಡಿಸಬೇಕು.

2) **ಕೆಲಸದ ಸ್ಥಿತಿಯಲ್ಲಿ ಸುಧಾರಣೆ:**—ಮಹಿಳಾ ಕಾರ್ಮಿಕರು ಬಿಸಿಲಿನ ಬೇಗೆ ಮಳೆ, ಚಳಿ, ಗಾಳಿಯನ್ನದೆ ಕಷ್ಟ ಸಹಿಸಿ ದುಡಿಯುತ್ತಾರೆ ಈ ಪರಿಸ್ಥಿತಿಯಲ್ಲಿ ಅವರು ಅನೇಕ ವಿಧವಾದ ಕಾಯಿಲೆಗಳಿಗೆ ತುತ್ತಾಗುವುದು ಸಹಜ. ಇವು ಅವರ ಕೆಲಸದ ದಕ್ಷತೆಯನ್ನು ಕುಂಠಿತಗೊಳಿಸುತ್ತವೆ. ಆದ್ದರಿಂದ, ಮಹಿಳಾ ಕಾರ್ಮಿಕರ ಕೆಲಸದ ಸ್ಥಿತಿಯಲ್ಲಿ ಸುಧಾರಣೆಯಾಗಬೇಕು. ಅನಾರೋಗ್ಯಸ್ಥಿತಿಯಲ್ಲಿ ಮಹಿಳೆಯರಿಗೆ ಹೊರೆಯಾಗುವಂತಹ ಕೆಲಸಗಳನ್ನು ವಹಿಸಬಾರದು. ಗರ್ಭಿಣಿ ಮಹಿಳೆಯರಿಗೆ ದೈಹಿಕ ಶ್ರಮದ ಕೆಲಸಗಳನ್ನು ವಹಿಸಬಾರದು.

3) **ಮಹಿಳೆಯರ ರಕ್ಷಣೆ:**—ಮಹಿಳೆಯರಿಗೆ ಹೆರಿಗೆಯಾಗುವ ಎರಡು ತಿಂಗಳ ಮೊದಲಿನಿಂದ ಹಾಗು ಹೆರಿಗೆಯಾದ ನಂತರ ಒಂದು ತಿಂಗಳವರಗೆ ಅವರನ್ನು ಕೆಲಸಕ್ಕೆ ನೇಮಿಸಿ ಕೊಳ್ಳ ಬಾರದು. ಕೆಲಸದ ನಡುವೆ ಅವರಿಗೆ ವಿಶ್ರಾಂತಿ ಕೊಟ್ಟು ಮಕ್ಕಳ ಪೋಷಣೆಗೆ ಅನುವು ಮಾಡಿಕೊಡ ಬೇಕು.

4) **ವಿದ್ಯಾಭ್ಯಾಸದ ಸೌಲಭ್ಯಗಳು:**— ಮಹಿಳಾ ಕೃಷಿ ಕಾರ್ಮಿಕರ ದಕ್ಷತೆ, ಜೀವನ ಮಟ್ಟಗಳನ್ನು ಸುಧಾರಿಸಲು ಅವರಿಗೆ ತಾಂತ್ರಿಕ ತರಬೇತಿ ಹಾಗು, ಪ್ರಾಥಮಿಕ ವಿದ್ಯಾಭ್ಯಾಸದ ಸೌಲಭ್ಯಗಳನ್ನು ಒದಗಿಸ ಬೇಕು. ಹಾಗೆಯೇ ದುಡಿದು ಬೇಸತ್ತಿರುವ ಅವರಿಗೆ ನಾಟಕ, ರೇಡಿಯೋ, ಆಗಾಗ್ಗೆ ಚಿತ್ರ ಪ್ರದರ್ಶನಗಳ ಮೂಲಕ ಮನರಂಜನೆಯ ಸೌಲಭ್ಯವನ್ನೂ ಪೂರೈಸ ಬೇಕು.

5) **ಸಮಾಜಿಕ ಭದ್ರತಾ ಸೌಲಭ್ಯಗಳು:**- ಮಹಿಳಾ ಕೃಷಿ ಕಾರ್ಮಿಕರು ತೋಳಿನಲ್ಲಿ ಶಕ್ತಿ ಇರುವವರೆಗೂ ದುಡಿಯಬಲ್ಲರು. ಮುಪಿನಲ್ಲಿ ಮಾತ್ರ ಅವರ ಸ್ಥಿತಿ ಚಿಂತಾ ಜನಕ. ಇದನ್ನು ತಪ್ಪಿಸಿ ಅವರಿಗೆ ಸೂಕ್ತ ರಕ್ಷಣೆಯನ್ನು ನೀಡಲು ಸಮಾಜಿಕ ಭದ್ರತಾ ಸೌಲಭ್ಯಗಳನ್ನು ಒದಗಿಸಬೇಕು.

6) **ಗ್ರಾಮ್ಯಗಳ ಆರ್ಥಿಕಾಭಿವೃದ್ಧಿ:** ಕೃಷಿ ಕಾರ್ಮಿಕರ ಆರ್ಥಿಕ ಸುಧಾರಣೆಗೆ ಸರಕಾರ ಇತ್ತೀಚಿಗೆ ಕೈ ಗೊಂಡಿರುವ ಒಂದು ಮುಖ್ಯ ಕ್ರಮವೆಂದರೆ ಗ್ರಾಮಗಳ ಆರ್ಥಿಕಾಭಿವೃದ್ಧಿ. ಕೃಷಿ ಅಭಿವೃದ್ಧಿಗೆ ಇದು ಪೂರಕವೂ ಹೌದು. ಕೃಷಿ ಕಾರ್ಮಿರಿಗೆ ಬೇರೆ ಉದ್ಯೋಗಾವಕಾಶಗಳನ್ನು ಬೆಳಸಲು ರಾಷ್ಟ್ರದ ವಿವಿಧ ಗ್ರಾಮಗಳಲ್ಲಿ, ತಾಲ್ಲೂಕುಗಳಲ್ಲಿ ಹಾಗು ಜಿಲ್ಲೆಗಳಲ್ಲಿ ವಿವಿಧ ಕಾರ್ಯಕ್ರಮಗಳನ್ನು ರೂಪಿಸಲಾಗಿದೆ. ಸಾಮುದಾಯಿಕ ಆಸ್ತಿಗಳನ್ನು ಸೃಷ್ಟಿಸಿ, ಆದರ ಮೂಲಕ ಉದ್ಯೋಗಾವಕಾಶಗಳನ್ನು ಸೃಷ್ಟಿಸುವುದು ಈ ಕ್ರಮದ ಒಂದು ಮುಖ್ಯ ಕಾರ್ಯಕ್ರಮ. ಇದರ ಪ್ರಕಾರ ಕೃಷಿ ಕಾರ್ಮಿಕರ ಅಭಿವೃದ್ಧಿಗಾಗಿ ಗ್ರಾಮ ಸೇವಾ ಕಾರ್ಯಕ್ರಮಗಳು ರೂಪಿತವಾಗಿವೆ. ಇದು 'ಅನಾವೃಷ್ಟಿಪೀಡಿತ ಪ್ರದೇಶ ಅಭಿವೃದ್ಧಿ ಕಾರ್ಯಕ್ರಮ'ದ ಅವಿಭಾಜ್ಯ ಅಂಗ, ಇದರಲ್ಲಿ ರಸ್ತೆ ನಿರ್ಮಾಣ, ನೀರಾವರಿ, ಪ್ರವಾಹನಿಯಂತ್ರಣ, ವಿದ್ಯುಚ್ಛಕ್ತಿ ಪೂರೈಕೆ ಮುಂತಾದ ಕಾರ್ಯ ಚಟುವಟಿಕೆಗಳಿಗೆ ಪ್ರಾಮುಖ್ಯತೆ ನೀಡಲಾಗಿದೆ.

7) **ಸ್ಥಾಯಿ ಸಮಿತಿ:**— ಕೇಂದ್ರ ಸರಕಾರ ಕೃಷಿ ಕಾರ್ಮಿಕರ ಸಮಸ್ಯೆಗಳನ್ನು ಪರಿಶೀಲಿಸಲು ಒಂದು ಸ್ಥಾಯಿ ಸಮಿತಿಯನ್ನು ರಚಿಸಿದೆ. ಈ ಸಮಿತಿಯ ಮುಖ್ಯ ಕಾರ್ಯ, ಕೃಷಿ ಕಾರ್ಮಿಕರ ಅಭಿವೃದ್ಧಿಗಾಗಿ ಜಾರಿಗೆ ತಂದಿರುವ ಕಾನೂನುಗಳನ್ನು ರಾಜ್ಯ ಸರಕಾರಗಳು ಕಾರ್ಯಗತ ಮಾಡುವ ಬಗ್ಗೆ ಮೇಲ್ವಿಚಾರಣೆ. ಈ ದಿಸೆಯಲ್ಲಿ ಸರಕಾರ ಅಜ್ಞರಾದ ಕೃಷಿ ಕಾರ್ಮಿಕರಿಗೆ ಕೂಲಿ ದರಗಳ ಬಗ್ಗೆ ತಿಳಿಸಲು ಭಿತ್ತಿ ಪತ್ರಗಳು, ಚಿತ್ರ ಪ್ರದರ್ಶನಗಳ ಮೂಲಕ ಪ್ರಚಾರ ಕೈ ಗೊಳ್ಳುತ್ತಿದೆ.

8) **ರೈತ ಮಹಿಳೆಯರಿಗೆ ತರಬೇತಿ:**— ಕೃಷಿ ಕಾರ್ಯಗಳಲ್ಲಿ ಹೆಣ್ಣು ಮಕ್ಕಳೂ ಸರಿಸಮಾನವಾಗಿ ಪಾಲ್ಗೊಳ್ಳುವುದರಿಂದ ಆಧುನಿಕ ಬೇಸಾಯ ಪದ್ಧತಿಯ ಅರಿವು ಅವರಿಗೆ ಇರಬೇಕಾದುದು ಸಹಜ. ಈ ದಿಸೆಯಲ್ಲಿ ಭಾರತದೇಶದ ಪ್ರಯತ್ನಗಳಾಗುತ್ತವೆ. ಆಯಾ ಪ್ರದೇಶದ ಮುಖ್ಯ ಬೆಳೆಗಳ ಮತ್ತು ಮಹಿಳೆಯರಿಗೆ ಆಸಕ್ತಿ

( 42ನೆ ಪುಟ ನೋಡಿ )

# ಗ್ರಾಮಾಂತರ ಬಸವ ಜಯಂತಿ - 198

ಹೆಚ್. ವಿ. ವೀರಭದ್ರಯ್ಯ, ಉಪನ್ಯಾಸಕರು ಕನ್ನಡ ವಿಭಾಗ, ಸಿದ್ಧಗಂಗಾ ಕಾಲೇಜು ತುಮಕೂರು.

**ಆತ್ಮೀಯ ಶರಣ ಬಂಧು,**

ತಿಮ್ಮನಾಯಕನ ಹಳ್ಳಿಯಿಂದ ಬೈಯಂಡಸಹಳ್ಳಿಯ ಕಡೆಗೆ ನಮ್ಮ ಪಯಣ ಸಾಗಿತ್ತು. ಬೆಂಗಳೂರಿನ ಸೆರಗಿಗೆ ಇದೆ ಆಶ್ರಯ. ಎಲ್ಲ ಕಾಯ ಕಷ್ಟದಿಂದ ಜೀವಿಸಿರುವವರೇ ಅಲ್ಲಿ. ದಿನಾಂಕ 19.5.87 ರಂದು ಬಸವಜಯಂತಿ ಆಚರಣೆಗೆ... ತನ್ನನ್ನು ಅರ್ಪಿಸಿಕೊಂಡಿತು ಬೈಯಂಡನ ಹಳ್ಳಿ.

ಪರಮ ಪೂಜ್ಯ ಶ್ರೀ ಶ್ರೀ ಗಳು ನಡೆಸಿರುವ ಬಸವ ತತ್ವ ಪ್ರಚಾರ ಮಣಿಹದಲ್ಲಿ ಮತ್ತೊಮ್ಮೆ ಪಾಲ್ಗೊಳುವ ಸದವಕಾಶ ಲಭ್ಯ ವಾದುದಕ್ಕೆ ಗ್ರಾಮೀಣ ಬಂಧುಗಳ ಉತ್ಸಾಹ ವಚನತೀರ್ಥದಲ್ಲಿ ಮೀಯುವ ಉತ್ಸುಕತೆ. ವ್ಯವಸ್ಥಿತವಾದ ಕಾರ್ಯಕ್ರಮ. ಒಪ್ಪವಾಗಿ ನಿರ್ಮಿಸಿದ ವೇದಿಕೆ. ತಳಿರು ತೋರಣಗಳ ಅಲಂಕಾರ. ಕಲಶ ಕನ್ನಡಿಗಳೊಂದಿಗೆ ಪೂಜ್ಯ ಶ್ರೀ ಶ್ರೀ ಗಳವರಿಗೆ ಸ್ವಾಗತ. ಗ್ರಾಮದುದ್ದಕ್ಕೂ ಭಕ್ತಿಪೂರ್ವಕ ಮೆರವಣಿಗೆ ಕಿಕ್ಕಿರಿದ ಜನಸ್ತೋಮ ಬೆಂಗಳೂರಿನಿಂದ ಬಂದ ವಾದ್ಯವೃಂದ ಸುಶ್ರಾವ್ಯ ನಾಗಸ್ವರ ವೇದಿಕೆಗೆ ಆಗಮನ. ಸಕಾಲಕ್ಕೆ ಸಮಾರಂಭದ ಆರಂಭ

ಪ್ರಾಧ್ಯಾಪಕ ಜಿ. ಎಸ್. ಸಿದ್ಧಲಿಂಗಯ್ಯನವರಿಂದ ಭಾಷಣ ಬಸವಣ್ಣ — ವಿನೂತನ ವಿಚಾರವಾದಿ ಕಲ್ಯಾಣವನ್ನು ಬೆಳಗಿದ ಶರಣ ಅಸಂಖ್ಯಾತ ಶರಣರನ್ನು ಬೆಳಗಿಸಿದ. ಅವನ ವಿಚಾರ ಧಾರೆ ಜೀವನದುದ್ದಕ್ಕೂ ನಮಗಿಂದು ಮಾರ್ಗದರ್ಶಕವೆಂದರು.

ಶ್ರೀ ಗೊ. ರು. ಚನ್ನಬಸಪ್ಪನವರು ಮಾತನಾಡುತ್ತ ನಗರದ ಕೃತಕ ಜೀವನದಿಂದ ಬೇಸರಗೊಂಡ ಬಸವಣ್ಣನವರ ವಚನ ಅಭ್ಯಾಸ ಹಳ್ಳಿಗರ ಸಂಸ್ಕೃತಿಯಲ್ಲಿ ಶರಣ ಸಂತರ ಜೀವಂತಿಕೆ ಶೀಲವಂತ ಜನಾಂಗ ರೂಪಿಸಿದವರು ಶರಣರು. ಬಸವಣ್ಣ ಮಾನವತಾವಾದಿ ಎಂದರು.

ಜನಪದ ಸಾಹಿತ್ಯದಲ್ಲಿ ಬಸವಣ್ಣ ಎಂಬ ವಿಷಯವಾಗಿ ಮಾತನಾಡುತ್ತ ಶ್ರೀ ವೀರಭದ್ರಯ್ಯನವರು ಗ್ರಾಮೀಣ ಬಂಧುಗಳು ಬಸವಣ್ಣನವರನು ಅರ್ಥಮಾಡಿಕೊಂಡಂತೆ ಇತರರು ಕಂಡದ್ದು ಕಡಿಮೆ. ತಮ್ಮ ರಕ್ತಬಂಧುವೆಂದೇ ಭಾವಿಸಿ ತಾಯಿಕರುಳಿನಿಂದ ಕಂಡ ಗರತಿಯರು ತಮ್ಮ ಹಾಡುಗಳಲ್ಲಿ ಬಸವಣ್ಣನವರ ದಿವ್ಯ ಜೀವನವನ್ನ ದಾಖಲೆಗೊಳಿಸಿದ್ದಾರೆಂದರು.

ಬಸವಣ್ಣನವರಿಂದ ನಾವು ಕಲಿಯಬೇಕಾಗಿರುವುದು ಜೀವನ ಕಲೆಯನ್ನು. ಜೀವನವೇ ಯೋಗ ಯೋಗವೇ ಜೀವನ ವೆಂಬುವುದೇ ಅವರ ಸೂತ್ರ. ಎಂದೂ ನಿರಾಶೆಯ ನಿಟ್ಟುಸಿರಿನ ಬೇಸರದ ಆಲಸ್ಯದ ಮಾತು ಬಸವಣ್ಣನವರಲ್ಲಿ ಬರಲಿಲ್ಲ.

ಸದಾ ಉತ್ಸಾಹ, ನಗೆ, ಜೀವನಶ್ರದ್ಧೆ, ದೀನ ದಲಿತರ ಸೇವೆಯಲ್ಲಿ ಬದುಕಿನ ಅರ್ಥ ಕಂಡುಕೊಂಡರು. ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಎಲ್ಲರನ್ನು ಸಮದೃಷ್ಟಿ ಸಮಭಾವದಿಂದ ನೋಡಿದರು. ತಾವು ಎಲ್ಲರಿಗಿಂತ ಕಿರಿಯ ಎಂದೇ ಭಾವಿಸಿದರು. ಜಗತ್ತು ಎಂದೆಂದೂ ಗೌರವಿಸುವಂಥ ಅಮೂಲ್ಯ ಜೀವನ ಸಂದೇಶವನ್ನು ನೀಡಿದರು. ಕಾಯಕ - ದಾಸೋಹಗಳು ಅವರು ನೀಡಿದ ಅದ್ಭುತ ಜೀವನ ಸೂತ್ರ. ತನ್ಮೂಲಕ ಜೀವನ ಸಮೃದ್ಧ ಮಾಡಿಕೊಳ್ಳಬಹುದು ಎಂಬುದಾಗಿ ಆಶೀರ್ವಚನ ನೀಡಿದರು ಅಧ್ಯಕ್ಷ ಪೀಠದಿಂದ ಪರಮ ಪೂಜ್ಯರು.

22–5–87 ರಂದು ನಾಟಕ ಪ್ರದರ್ಶನವಾಯಿತು.

---

(ಕೃಷಿಯಲ್ಲಿ ಮಹಿಳೆ, 40ನೆ ಪುಟದಿಂದ)
ಇರುವ ಬೆಳೆಗಳ ಕೃಷಿ ವಿಧಾನವನ್ನು ವೈಜ್ಞಾನಿಕ ರೀತಿಯಲ್ಲಿ ಬೋಧಿಸುವುದು, ಅವರಲ್ಲಿ ಕೃಷಿ ವಿಧಾನಗಳನ್ನು ಕುರಿತ ಅಜ್ಞಾನ ಮತ್ತು ಮೂಢ ನಂಬಿಕೆಗಳನ್ನು ಹೋಗಲಾಡಿಸುವುದು ಇದರ ಉದ್ದೇಶ.

ಕರ್ನಾಟಕ ರಾಜ್ಯದಲ್ಲಿ ಹನ್ನೊಂದು ತರಬೇತಿ ಕೇಂದ್ರಗಳು ಈ ದಿಸೆಯಲ್ಲಿ ಕೆಲಸ ಮಾಡುತ್ತಿವೆ. ಇವುಗಳಲ್ಲಿ ಒಂದು ಬೆಂಗಳೂರಿನ ಕೃಷಿ ವಿಶ್ವ ವಿದ್ಯಾಲಯಕ್ಕೆ ಸೇರಿದ್ದು. ಉಳಿದವು ಬೇರೆ ಜಿಲ್ಲೆಗಳಲ್ಲಿದ್ದು ಕೃಷಿ ಇಲಾಖೆಗೆ ಸೇರಿವೆ. ಬೆಂಗಳೂರಿನ ಸಂಸ್ಥೆಯು ಡೆನ್ಮಾರ್ಕ್ ನೆರವಿನಿಂದ ನಡೆಯುತ್ತಿದ್ದು ಇಲ್ಲಿ ಪ್ರತಿ ತಿಂಗಳೂ 30 ರೈತ ಮಹಿಳೆಯರು ಬಂದು ಪ್ರತ್ಯೇಕ ತಂಡ, ಪುರುಷರ ತಂಡಗಳೊಂದಿಗೆ ಕೃಷಿ ತರಬೇತಿ ಪಡೆಯುತ್ತದೆ. ಈ ಸಂಸ್ಥೆಯ ಕಾರ್ಯಕ್ಷೇತ್ರ ಬೆಂಗಳೂರು ಜಿಲ್ಲೆ.

ಈ ತರಬೇತಿ ಶಿಬಿರಕ್ಕೆ ವಿವಿಧ ತಾಲ್ಲೂಕುಗಳಿಂದ ರೈತ ಮಹಿಳೆಯರು ಬರುತ್ತಾರೆ. ಇವರನ್ನು ಆಯಾ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು ಆಯ್ಕೆ ಮಾಡಿ ಕಳಿಸುತ್ತಾರೆ. ತರಬೇತಿ ನೀಡುವಷ್ಟು ದಿನವೂ ಊಟ, ವಸತಿ ಎಲ್ಲವನ್ನು ಸಂಸ್ಥೆಯೇ ಭರಿಸುತ್ತದೆ. ಕೃಷಿ ವಿಶ್ವವಿದ್ಯಾಲಯದ ತಜ್ಞರು ಬಂದು ಶಿಬಿರಾರ್ಥಿಗಳಿಗೆ ಸಲಹೆಗಳನ್ನು ಕೊಡುವುದಲ್ಲದೆ ಪ್ರಯೋಗ ತಾಕುಗಳಿಗೆ ಕರೆದೊಯ್ದು ವಿವರಣೆ ನೀಡುತ್ತಾರೆ. ಶಿಬಿರ ಮುಗಿದ ಮೇಲೆ ತಮ್ಮ ಸ್ವಂತ ಜಮೀನಿನಲ್ಲಿ ಹೊಸ ವಿಧಾನವನ್ನು ಪರೀಕ್ಷಿಸುವಾಗ ಏನಾದರೂ ಸಂದೇಹಗಳು ಬಂದಲ್ಲಿ ರೈತಮಹಿಳೆಯರು ಪತ್ರ ಬರೆದು ಉತ್ತರ ಪಡೆಯಬಹುದು. ತರಬೇತಿ ಪಡೆದವರು ತಮ್ಮ ಹಳ್ಳಿಗಳಲ್ಲಿ ಚರ್ಚಾಮಂಡಲಿಗಳನ್ನು ಕಟ್ಟಿಕೊಂಡು ಹೊಸ ಕೃಷಿ ವಿಧಾನಗಳ ಮಾಹಿತಿಯನ್ನು ಇತರರೊಂದಿಗೆ ಹಂಚಿಕೊಳ್ಳುವಂತೆಯೂ ಉತ್ತೇಜನ ನೀಡಲಾಗುತ್ತದೆ.

( ಮುಂದುವರಿಯುತ್ತದೆ )

